



Photo by T. Suryanarayana

ನೀರಿನ ಕುದುರೆ




ವಿಜಯಾ ರವರ...

# ಮದುವೆ ಮಾಡಿ ನೋಡು

ನಿರ್ಮಾಪಕರು

## ನಾಗಿರೆಡ್ಡಿ-ಚಕ್ರಪಾಣಿ

ಡೈರೆಕ್ಷನ್

## ಪ್ರಸಾದ್

## ಈ ಸಂಚಿಕೆಯಲ್ಲಿ

## ಚಂದಾದಾರರಿಗೆ ಸೂಚನೆಗಳು

★ ಚಂದಮಾಮಾ ಮಾಸಪತ್ರಿಕೆಯು ಪ್ರತಿ ತಿಂಗಳ ಮೊದಲನೆಯದಿನ ಪ್ರಕಟವಾಗುವುದು. ಒಡನೆಯೇ ಚಂದಾದಾರರಿಗೆ ಪೋಸ್ಟು ಮುಖಾಂತರ ಕಳಿಸಲಾಗುವುದು. ಯಾರಿಗಾದರೂ ಪ್ರತಿಯು ಸಕಾಲದಲ್ಲಿ, ಹೆಚ್ಚೆಂದರೆ 7 ನೇ ತಾರೀಖಿನೊಳಗೆ ತಲಪದಿದ್ದಲ್ಲಿ ಕೂಡಲೇ ಸಂಬಂಧಪಟ್ಟ ಸ್ಥಳೀಯ ಪೋಸ್ಟ್ ಆಫೀಸಿನಲ್ಲಿ ವಿಚಾರಿಸಿ ಆಮೇಲೆ ನಮಗೆ ತಡಮಾಡದೆ ತಿಳಿಸಬೇಕು.

★ ಅಂತಹ ದೂರು ನಮ್ಮ ಕೈಗೆ ಆಯಾತಿಂಗಳ 10 ನೇ ತಾರೀಖಿನೊಳಗೆ ತಲಪಬೇಕು. ತಡವಾಗಿ ಬಂದ ಪತ್ರಗಳನ್ನು ಗಮನಿಸಲಾಗುವುದಿಲ್ಲ.

★ ಚಂದಾದಾರರು ಬರೆಯುವ ಯಾವ ಪತ್ರದಲ್ಲೇ ಆಗಲೀ ತಮ್ಮ ಚಂದಾ ಸಂಖ್ಯೆಯನ್ನು ಸ್ಪಷ್ಟವಾಗಿ ನಮೂದಿಸಿರಬೇಕು. ಇದು ಬಹಳ ಮುಖ್ಯ. ತಮ್ಮ ಚಂದಾ ಸಂಖ್ಯೆ ನಮೂದಿಸದೆ ಬರೆಯುವ ಚಂದಾದಾರರ ಪತ್ರಗಳನ್ನು ಗಮನಿಸುವುದು ಸಾಧ್ಯವಿಲ್ಲ.

★ ಅಂತಹ ಚಂದಾ ಸಂಖ್ಯೆ ಪ್ರತಿ ಚಂದಾದಾರರಿಗೂ ಅವರ ಚಂದಾ ಹಣ ಸಂದಬಗ್ಗೆ ಬರೆದ ಕಾರ್ಡಿನಲ್ಲೂ, ಅವರಿಗೆ ಪ್ರತಿಸಲ ಕಳಿಸುವ ಚಂದಮಾಮದ ಸುತ್ತು ಕಾಗದದ ಮೇಲೂ ಬರೆಯಲ್ಪಟ್ಟಿರುತ್ತೆ.

★ ನಾವು ಪ್ರತಿಯನ್ನು ಅಂಚೆಮೂಲಕ ಕಳಿಸಿದಮೇಲೆ ಅವು ಚಂದಾದಾರರನ್ನು ಸೇರದಿದ್ದರೆ ಅದಕ್ಕೆ ನಾವು ಜವಾಬ್ದಾರರಲ್ಲ. ಆದರೆ ಚಂದಾದಾರರು ಅವಶ್ಯವಿದ್ದಷ್ಟು ಹೆಚ್ಚು ಹಣ ಕೊಟ್ಟು ಸರ್ಟಿಫಿಕೇಟ್ ಆಫ್ ಪೋಸ್ಟಿಂಗ್‌ನಲ್ಲಿಯಾಗಲೀ ರಿಜಿಸ್ಟರ್ಡ್ ಪೋಸ್ಟಿನಲ್ಲಾಗಲಿ ಪ್ರತಿ ತರಿಸಿಕೊಳ್ಳಬಹುದು

**CHANDAMAMA**

ಐ. ಟಿ. ಎಲ್. ಗ್ರೈಪ್ ಸಿರಪ್

ನಿಮ್ಮ ಮುದ್ದು ಕಂದನ
ಅಜೀರ್ಣ ವ್ಯಾಧಿಗಳನ್ನು ತಡೆದು
ಆರೋಗ್ಯ ಕಾಪಾಡುವ ಅಮೃತಪಾನ.

ತಯಾರಕರು :

ದಿ ಮೈಸೂರು ಇಂಡಸ್ಟ್ರಿಯಲ್ ಅಂಡ್
ಟೆಸ್ಟಿಂಗ್ ಲ್ಯಾಬೊರೇಟರಿ
ಲಿಮಿಟೆಡ್.

ಮಲ್ಲೇಶ್ವರಂ ಪೋಸ್ಟ್, ಬೆಂಗಳೂರು 3



ಶ್ರೇಷ್ಠತೆಯ
ಹೆಗ್ಗುರುತು




# ಗ್ರೈಪ್ ಸಿರಪ್



ಮಕ್ಕಳೆಂದರೆ ತಾಯಂದಿರಿಗೆ ಸಿಹಿ!
ಪೆಪ್ಪರಮೆಂಟುಗಳು ಮಕ್ಕಳಿಗೆ ಸಿಹಿ!

ಸಿಹಿಯುಳ್ಳ ಪೆಪ್ಪರಮೆಂಟುಗಳು




ಯವರದೇ



**M.A.P. INDUSTRIES**
TONDIARPET. MADRAS. 21



# ಚಂದಮಾಮ

ಮಕ್ಕಳ ಕಥೆಯ ಮಾಸಪತ್ರಿಕೆ

## ಮಳೆ

ಮಳೆಯೇ ಮಳೆಯೇ ಎಲ್ಲಿಂದ ಬಂದೆ
ಕಾರ್ಮೋಡದಿಂದ ಜಿಗಿದು ಬಂದೆ
ರೈತನ ಹಿತವನು ಕೋರಲು ಬಂದೆ
ಮಕ್ಕಳಿಗಾನಂದ ಬೀರಲು ಬಂದೆ

ಮಳೆಯೇ ಮಳೆಯೇ ಎಲ್ಲಿಂದ ಬಂದೆ
ಭೂಮಿಗೆ ಸೊಬಗನು ಬೀರಲು ಬಂದೆ
ಪೈರಿಗೆ ನೀರನು ಉಣಿಸಲು ಬಂದೆ
ಓಣಿಯ ಹೊಲಸನು ತೊಳೆಯಲು ಬಂದೆ

ಮಳೆಯೇ ಮಳೆಯೇ ಎಲ್ಲಿಂದ ಬಂದೆ
ಬಾವಿಕೆರೆಗಳನ್ನು ತುಂಬಿಸಲು ಬಂದೆ
ದೇಶದ ಸಂಪತ್ತು ಬೆಳಸಲು ಬಂದೆ
ಸಂತಸ ಸುಗ್ಗಿಯನೀಯಲು ಬಂದೆ

ಮಳೆಯೇ ಮಳೆಯೇ ಎಲ್ಲಿಂದ ಬಂದೆ
ಕಾರ್ಮೋಡದಿಂದ ಜಿಗಿದು ಬಂದೆ

ಲೇಖಕ:— ಶ್ರೀನಿವಾಸ.

ನವಂಬರ್ ೧೯೫೧

ಸಂಪುಟ ೨
ಸಂಚಿಕೆ ೫

# ಮಾನವ ಸೇವೆ

ಒಂದು ದಿನ ರಾತ್ರಿ ಸಮಯದಿ
ಹುಂಣಿಮೆಯ ಬೆಳದಿಂಗಳು
ಹಾಲು ಚೆಲ್ಲಿದ ರೀತಿಯಿಂದಲಿ
ಎಲ್ಲ ಕಡೆಗೂ ಹರಡಲು

ಆ ಪ್ರ ಶಾಂತದಿ ಕೋಣೆಯೊಳಗಡೆ
ಮೆತ್ತೆ ಮೇಲೆ ಬೆನಾದಮನು
ಸೌಖ್ಯದಿಂದಲಿ ಪವಡಿಸು
ತ್ತಿರಲು ಕನಸನು ಕಂಡನು

ಬೆಳ್ಳಿತಿಂಗಳ ತಂಪು ಎಲ್ಲೆಡೆ
ಶಾಂತಿಯಿಂದಲಿ ಹಬ್ಬಿತು
ಹುಲ್ಲುಹಸುರಿಗೂ ಮನೆಯ ಮಾಡಿಗೂ
ಕಿಟಕಿಯೊಳಗೂ ನುಗ್ಗಿತು.

ಅಲ್ಲಿ ಯೊಬ್ಬಳು ದೇವವನಿತೆಯು
ಹಾಲು ಬೆಳ್ಳಿಯ ಬೆಳಕಲಿ,
ಕುಳಿತು ಬರೆಯುತಲೊಂದು ಗ್ರಂಥದೊಳ್
ಸಾಲು ಸಾಲಿನ ಗತಿಯಲಿ

ಇದನು ಕನಸಲಿ ಕಂಡನಾದಮ
ಒಡನೆ ಕೇಳಿದ ಬೆದರದೆ
" ಬರೆವುದೇನದು ಪೇಳಲೆನಗೂ
ಕೆಲಸ ಮೋದವು ಚದುರೆಯೆ, "

ಪೇಳಲದಕಾ ವನಿತೆಯೆಂದಳು
" ದೇವ ಸೇವಕ ಪಟ್ಟಿಯು "
ನುಡಿದ ನಾದಮ " ನನ್ನ ನಾಮವು
ಇರಲು ಅದರೊಳು ಗಟ್ಟಿಯು "

'ಕಮಲಪ್ರಿಯ' ಮದರಾಸು

(ತೆಲಗಿನಿಂದ)

ದೇವವನಿತೆಯ ತುಟಿಯ ಮೇಗಡೆ
ಕಿರುನಗೆಯು ಹೊರ ಸೂಸಿತು,
ಇಂತು ನುಡಿದಳು "ದೇವಸೇವೆಯೊಳ್
ನಿನ್ನ ಪೆಸರದು ಸೇರದು"

ಖಿನ್ನಮನದಲಿ ಆತನೆಂದನು
"ಇನ್ನಿಲ್ಲದಿರೆ ಹೋಗಲಿ
ಮನುಜ ಸೇವಕ ಪಟ್ಟಿಲಾದರೂ
ನನ್ನ ಹೆಸರೂ ಸೇರಲಿ"

ಆಗಲೆನ್ನುತ ದೇವಸುಂದರಿ
ಮಾಯವಾದಳು ಬೆಳಕಲಿ
ದೇವ ಮನುಜರ ಸೇವೆಯೆನ್ನುತ
ಕನವರಿಸಿದನಾದಮ ಕನಸಲಿ

ಉದಯವಾಯಿತು ಆದಮನೆದ್ದನು
ತನ್ನ ಕನಸನು ನೆನೆದನು
ಆದರೇನಿದು ಅಲ್ಲೆ ಪುಸ್ತಕ
ಕನಸು ನಿಜವೇ ಎಂದನು

ಸಾರಿ ಲಗುಬಗೆಯಿಂದ ಗ್ರಂಥವ
ಬಿಚ್ಚಿ ಪಟ್ಟಿಯ ನೋಡಿದ.
ದೇವ ಸೇವಕ ಸಾಲುಮೊದಲಲಿ
ತನ್ನ ನಾಮವನೋದಿದ

ಮನುಜ ಸೇವೆಯೆ ದೇವಸೇವೆಯು
ಎಂದರಿತನಾದಮ ನಾಗಲೆ
ಅದುವೆ ದೈವಕೆ ಮೆಚ್ಚುಗೆಯೆಂ
ಬುದನೆ ಸಾರಿದ ಕೂಡಲೆ






ಒಬ್ಬ ಹುಡುಗನಿದ್ದ. ಅವನಿಗೆ ಪುಸ್ತಕ ಓದುವುದೆಂದರೆ ಅಮಿತ ಪ್ರೀತಿ. ಎಲ್ಲಕ್ಕಿಂತಲೂ ಹೆಚ್ಚಾಗಿ ಜಾರ್ಜ್‌ವಾಷಿಂಗ್‌ಟನ್ ಎಂಬಾತನ ಜೀವನ ಚರಿತ್ರೆ ಆತನನ್ನು ತುಂಬಾ ಆಕರ್ಷಿಸಿತು. ಅದರಲ್ಲಿದ್ದ ಈ ವಾಕ್ಯವನ್ನು ಆತನು ಬಾಯಿಪಾಠ ಮಾಡಿಕೊಂಡ. 'ಗುಲಾಮಗಿರಿ ಪಾಪವಲ್ಲದ ಪಕ್ಷದಲ್ಲಿ, ಈ ಪ್ರಪಂಚದಲ್ಲಿ ಪಾಪವೆಂಬುದು ಬೇರೆ ಇಲ್ಲ'

ಹೀಗೆ ತುಂಬಾ ಪ್ರೀತಿಯಿಂದ ನೋಡಿಕೊಳ್ಳುತ್ತಿದ್ದ ಆ ಹುಡುಗನ ಪುಸ್ತಕವನ್ನು ಒಂದು ದಿನ ಆತನ ತಂದೆ ತೆಗೆದು, ತಲೆ ಕೆಳಗೆ ದಿಂಬಾಗಿಟ್ಟುಕೊಂಡು ನಿದ್ದೆ ಮಾಡುತ್ತಿದ್ದನು.

ಇದನ್ನು ಕಂಡು ಆ ಹುಡುಗನ ಮನಸ್ಸಿಗೆ ಬಹಳ ಕರಕರೆಯುಂಟಾಯಿತು. ಅಂಥ ಅಮೂಲ್ಯವಾದ ಪುಸ್ತಕವನ್ನು ತಲೆ ದಿಂಬಾಗಿ ಉಪಯೋಗಿಸುವುದು ಆತನ ಮನಸ್ಸಿಗೆ ಒಡಂಬಡಲಿಲ್ಲ. ತಂದೆಯನ್ನು ಎಚ್ಚರಗೊಳಿಸದೆ ಮೆಲ್ಲನೆ ಆತನ ಹತ್ತಿರ ಹೋಗಿ ಕುಳಿತು. ಆ ಪುಸ್ತಕವನ್ನು ತೆಗೆದು ಒಂದುಕಡೆಯಿಟ್ಟು, ಅದರ ಸ್ಥಾನದಲ್ಲಿ ತನ್ನ ತೊಡೆಯನ್ನು ತಂದೆಯ ತಲೆಯ ಕೆಳಗೆ ಇಟ್ಟ. ಸ್ವಲ್ಪ ಹೊತ್ತಾದ ತರುವಾಯ ತಂದೆಗೆ ಎಚ್ಚರವಾಯಿತು. "ಇದೇನೋ ಮಗೂ, ಪುಸ್ತಕ ಏಕೆ ತೆಗೆದುಬಿಟ್ಟೆ? ಹೀಗೇಕೆ ಕುಳಿತುಕೊಂಡಿರುವೆ?" ಎಂದು ಅಚ್ಚರಿಯಿಂದ ಕೇಳಿದ. ಆ ಹುಡುಗ ತನ್ನ ಅಭಿಪ್ರಾಯನ್ನು ವಿವರಿಸಿ ಹೇಳಿದ. ಆಗ ಆತನ ತಂದೆ ಆ ಉದ್ದೇಶವನ್ನು ಮೆಚ್ಚಿಕೊಂಡು "ಮಗೂ, ನೀನು ಎಂದಿಗಾದರೂ ಗುಲಾಮಗಿರಿಯನ್ನು ತೊಲಗಿಸಿ, ಲೋಕೋಪಕಾರ ಮಾಡುವೆ?" ಎಂದು ಆಶೀರ್ವಾದ ಮಾಡಿದ. ಅದೇಪ್ರಕಾರ ಬೆಳೆದು ದೊಡ್ಡವನಾದ ಮೇಲೆ ಆ ಬಾಲಕನು ಎಷ್ಟೋ ಶತಮಾನಗಳಿಂದ ಅತಿ ನಿಕೃಷ್ಟಬಾಳಿನಿಂದ ಜೀವಿಸುತ್ತಿದ್ದ ಅಮೆರಿಕದ ನೀಗ್ರೋ ಜನರ ಗುಲಾಮಗಿರಿಯನ್ನು ನಿರ್ಮೂಲ ಮಾಡಲು ತನ್ನ ಯಾವತ್ತೂ ಶಕ್ತಿಯನ್ನು ಧಾರೆ ಎರೆದು, ಆ ಜಾತಿಯನ್ನು ಉದ್ಧಾರ ಮಾಡಿದ. ಆ ಹುಡುಗನೇ ಚಿಕ್ಕಂದಿನಲ್ಲಿ ತಾನು ಕಲಿತ ನೀತಿವಾಕ್ಯವನ್ನು ದೊಡ್ಡವನಾದಮೇಲೆ ಆಚರಣೆಗೆ ತಂದು ಮಾನವಸೇವೆ ಮಾಡಿದ ಮಹಾನುಭಾವ, ಸುಪ್ರಸಿದ್ಧನಾದ ಎಬ್ರಹಂಲಿಂಕನ್.




ಒಂದೂರಿನಲ್ಲಿ ಮಾಧವನೆಂಬ ಹುಡುಗನಿದ್ದ. ಅವನು ದನಕರುಗಳನ್ನು ಮೇಯಿಸಿಕೊಂಡು ಜೀವಿಸುತ್ತಿದ್ದ. ಅವನ ಹಸ್ತಗುಣ ಒಳ್ಳೆಯದೆಂತಲೂ, ಅವನ ಪೋಷಣೆಯಲ್ಲಿ ದನಕರುಗಳು ಸುಖವಾಗಿರುತ್ತವೆಯೆಂದೂ ಜನರ ನಂಬಿಕೆ.

ಮಾಧವನ ಕೈಯಲ್ಲಿ ಸದಾ ಒಂದು ಪಿಳ್ಳಂಗೋವಿ (ಕೊಳಲು) ಇರುತಿತ್ತು. ಅದನ್ನು ಊದುತ್ತಿದ್ದರೆ ಮುರಳಿ ಕೃಷ್ಣನು ವೇಣುಗಾನ ಮಾಡಿದಂತೆ ಇರುತಿತ್ತು. ಆ ಗಾನಕ್ಕೆ ಜಂತುಜಾಲವೆಲ್ಲಾ ಬಂದು ಅವನನ್ನು ಸುತ್ತುಗಟ್ಟುವವು. ಸುತ್ತಮುತ್ತಲಿನ ಜನ ಬಂದು 'ಮಾಧವಾ, ಮತ್ತೊಂದು ಬಾರಿ ಊದು' ಎಂದು ಪುಸಾಲಾವಣೆ ಮಾಡಿ, ಕೇಳುವರು.

ಈ ವಿಷಯ ಹತ್ತು ಮೈಲಿ ದೂರದ ಪಟ್ಟಣದಲ್ಲಿದ್ದ ಶ್ರೀಮಂತನೊಬ್ಬನ ಕಿವಿಗೆ ಬಿತ್ತು. ಆ ಶ್ರೀಮಂತನಲ್ಲಿ ದನಕರುಗಳ ದೊಡ್ಡ ಮಂದೆಯಿತ್ತು. ಗೋರಕ್ಷಣೆಯೆಂದರೆ ಆತನಿಗೆ ತುಂಬಾ ಇಷ್ಟ. ಅದರಿಂದಲೇ ಆತನು ಉತ್ತಮವಾದ ರಾಸುಗಳು ಯಾವ ದೇಶದಲ್ಲಿದ್ದರೂ, ಎಷ್ಟೇ ಬೆಲೆಯಾದರೂ ಸರಿ, ಕೊಂಡು ಕೊಳ್ಳುತ್ತಿದ್ದನು. ಮಾಧವನೊಬ್ಬನೇ ತನ್ನ ಮಂದೆಗೆ ತಕ್ಕ ಗೋಪಾಲಕನೆಂದು ಭಾವಿಸಿ, ಅವನನ್ನು ಬರಮಾಡಿಕೊಂಡು, ತನ್ನ ಮಂದೆಯ ಮೇಲ್ವಿಚಾರಕನಾಗಿ ನೇಮಿಸಿದನು.

ಮಾಧವನು ಆ ಶ್ರೀಮಂತನ ಹಸುಗಳನ್ನು ತುಂಬಾ ಚೆನ್ನಾಗಿ ಮೇಯಿಸುತ್ತಿದ್ದನು. ಹತ್ತಿರವಿದ್ದು ಹೊಟ್ಟು ತವಡು ಹಾಕಿಸುವನು. ಹರಿಯುವ ನೀರಿನಲ್ಲಿ ಪ್ರತಿದಿನಾ ಅವುಗಳಿಗೆ ಸ್ನಾನ ಮಾಡಿಸುವನು. ಸಾಸಿರಕಣ್ಣುಗಳಿಂದ ಹಸುಗಳನ್ನು ಕಾಪಾಡಿಕೊಳ್ಳುತ್ತಿದ್ದನು. ಅವನು ಪ್ರತಿಯೊಂದು ದನವನ್ನೂ ಹೆಸರು ಹಿಡಿದು ಕೂಗಿ ಗಂಗೆದೊಗಲನ್ನು ತೀಡಿ, ಡುಬ್ಬನ್ನು ನೀವುತ್ತಿದ್ದನು. 'ಗಂಗೆ ಬಾರೆ' ಎಂದರೆ ಬಿಳಿ ಹಸು ಬರುವುದು. 'ಕಪಿಲೆ ಬಾವಮ್ಮಾ' ಎಂದರೆ ಕಂದು ಬಣ್ಣದ ಹಸು ಓಡೋಡಿ ಬರುವುದು. ಇದೇ ರೀತಿ ಕರಿ ಹಸು, ಗಿಡ್ಡ ಹಸು, ಎಲ್ಲಾ ಆತನ ಹತ್ತಿರಕ್ಕೆ ಪ್ರೀತಿಯಿಂದ ಬರುವುವು.

ಕೆ. ವಿಶಾಲಾಕ್ಷಿ, ಚೆನ್ನಪಟ್ಟಣ.




ಬೆಳಗ್ಗೆ ಕರುಗಳನ್ನು ಬಿಟ್ಟ ಕೂಡಲೇ ಮಾಧವನು ಅವುಗಳನ್ನು ಮೈದಾನಕ್ಕೆ ಕರೆದುಕೊಂಡು ಹೋಗಿ ಮೇಯಲು ಬಿಡುವನು. ಮಿಕ್ಕ ಹಸುಗಳ ಮಂದೆಯಂತೆ ಮಾಧವನು ತನ್ನ ಹಸುಗಳನ್ನು ಅಟ್ಟಬೇಕಾಗಿರಲಿಲ್ಲ. ಕೈಯಲ್ಲಿರುವ ಪಿಳ್ಳಂಗೋವಿಯಿಂದ ಸಂಜ್ಞೆ ಮಾಡುವನು. ಅವು ಆತನ ಇಚ್ಛೆಯನ್ನು ಕಂಡುಹಿಡಿದು ಅದೇ ರೀತಿ ನಡೆದುಕೊಳ್ಳುತ್ತಿದ್ದವು. ದಿನಾ ಅವುಗಳನ್ನು ಮೇಯಲು ಬಿಟ್ಟು, ಮಾಧವನು ಒಂದು ಮರ ಹತ್ತಿ ನೆರಳಿನಲ್ಲಿ ಕುಳಿತು ಹಾಯಾಗಿ ಪಿಳ್ಳಂಗೋವಿ ಊದುವನು. ಆತನು ಬಾರಿಸುತ್ತಿದ್ದರೆ ಅವು ತಲೆ ಎತ್ತಿ ಕೇಳುವುವು.

ಸಂಜೆ ಸಮಯಕ್ಕೆ ಮಾಧವ "ಗಿಲಿಲಿಲಿ! ಗಿಲಿಲಿಲಿ!! ಗಿಲಿಲಿಲಿ!!!" ಎಂದು ಊದುವನು. ಎಲ್ಲೆಲ್ಲೋ ಮೇಯುತ್ತಿದ್ದ ಹಸುಗಳು ಕೂಡಲೇ ಬಂದು ಅವನ ಸುತ್ತ ಸೇರುವುವು. ಮನೆಗೆ ಸೇರಿಕೊಂಡ ಮೇಲೆ ಹಾಲು ಕರೆಯುವ ಸಮಯದಲ್ಲಿ ಮಾಧವನು ಮುರಳಿ ಊದುವನು. ಉತ್ಸಾಹದಿಂದ ಅವು ಹೆಚ್ಚು ಹಾಲು ಕೊಡುವುವು.

ಒಂದು ದಿನ ಮಾಧವನು ಗೋವುಗಳನ್ನು ಮೈದಾನದಲ್ಲಿ ಬಿಟ್ಟು ಮರದ ನೆರಳಿನಲ್ಲಿ ಕುಳಿತಿರುವಾಗ ಅಲ್ಲಿಗೆ ಪಂಜುಗಳ್ಳರ ಗುಂಪೊಂದು ಬಂತು. ಒಳ್ಳೆ ದಷ್ಟಪುಷ್ಟವಾದ ಆ ಹಸುಗಳ ಮಂದೆಯನ್ನು ನೋಡಿದ ಕೂಡಲೇ ಕಳ್ಳರ ನಾಯಕನ ಮನಸ್ಸು ಚಲಿಸಿತು. 'ಇವುಗಳನ್ನು ನಮ್ಮ ಹಟ್ಟಿಗೆ ಹೊಡೆಯಿರ್ರೋ' ಎಂದು ತನ್ನ ಅನುಚರರಿಗೆ ಆಜ್ಞಾಪಿಸಿದ. ಅವರೆಷ್ಟು ಅಟ್ಟಿದರೂ, ಎಷ್ಟು ಬೆದರಿಸಿದರೂ, ಆ ಹಸುಗಳು ಕದಲಲಿಲ್ಲ, ಮೆದಲಲಿಲ್ಲ. 'ಹೋಗ್ರೋ ಹುಚ್ಚಪ್ಪಗಳಿರಾ' ಎಂದಂತೆ ಅವು ಕಳ್ಳರಕಡೆ ಒಂದು ಸಾರಿ ಕತ್ತೆತ್ತಿ ನೋಡಿ, ಮತ್ತೆ ತಲೆ ತಗ್ಗಿಸಿಕೊಂಡು ತಮ್ಮ ಪಾಡಿಗೆ ತಾವು ಹುಲ್ಲು ಮೇಯುತ್ತಿದ್ದವು.

ಅವರು ಹಿಂತಿರುಗಿ ಈ ವಿಷಯವನ್ನು ನಾಯಕನಿಗೆ ಹೇಳಿದರು. ಅವನು ಕೋಪದಿಂದ ಬೆಂಕಿಯಾಗಿ "ಎಲೆ, ತಿಳಿಗೇಡಿಗಳಾ, ಇದೇಯೋ ನಿಮ್ಮ ಬುದ್ಧಿವಂತಿಕೆ? ಅವುಗಳನ್ನು ಯಾರೋ ಮಂತ್ರ ಶಕ್ತಿಯಿಂದ ಕಟ್ಟಿಹಾಕಿರಬೇಕು. ಆ ಮಂತ್ರವಾದಿಯನ್ನು

ಹಿಡಿದು ಕೊಂಡು ಬನ್ನಿ. ಇಲ್ಲದಿದ್ದರೆ ನಿಮ್ಮ ಪ್ರಾಣಗಳು ಉಳಿಯಲಾರವು" ಎಂದು ಆಜ್ಞೆ ಮಾಡಿದ. ಇದನ್ನು ಕೇಳಿ ಅವನ ಅನುಚರರು ಗಡಗಡನೆ ನಡುಗಿದರು. ಪ್ರತಿಯೊಬ್ಬನೂ ಒಂದೊಂದು ದಿಕ್ಕಿಗೆ ಓಡಿದರು. ಅವರಲ್ಲಿ ಬುದ್ಧಿಶಾಲಿಯಾದವನೊಬ್ಬನು ಮಾತ್ರ ಬಹಳ ದೂರ ಹೋಗಲಿಲ್ಲ. 'ನಿಜವಾಗಿ ಅಂತಹ ಮಂತ್ರಗಾರನೇಯಿರುವ ಪಕ್ಷಕ್ಕೆ ಅವನು ಈ ಸುತ್ತಮುತ್ತಾಲೇ ಎಲ್ಲೋ ಅವಿತಿಟ್ಟು ಕೊಂಡಿರಬೇಕು' ಎಂದುಕೊಂಡು ಅಲ್ಲಿದ್ದ ಪೊದೆ ಪೊಟ್ಟರೆಗಳನ್ನು ಜಾಗರೂಕತೆಯಿಂದ ಹುಡುಕುತ್ತಿದ್ದ.




* * *

ಈಗ ಇಷ್ಟೊಂದು ಜನ ಕಳ್ಳರನ್ನು ಎದುರಿಸುವುದು ಯಾರಿಂದ ಸಾಧ್ಯ? ಅದರಲ್ಲೂ ಸಣ್ಣ ಹುಡುಗ ಮಾಧವನ ಕೈಯಲ್ಲಿ ಸಾಧ್ಯವೇ? ಅವನಿಗೆ ಏನು ಮಾಡಬೇಕೋ ತಿಳಿಯಲಿಲ್ಲ. ಮೆಲ್ಲನೆ ಮರದಿಂದ ಕೆಳಕ್ಕೆ ಇಳಿದು, ಒಂದು ಪೊದೆಯಲ್ಲಿ ಅವಿತಿಟ್ಟುಕೊಂಡು ಅವರ ಓಡಾಟವನ್ನು ಗಮನಿಸುತ್ತಿದ್ದ. ಇಷ್ಟರಲ್ಲಿ ಸನಿಯದಲ್ಲೇ ಹುಡುಕಾಡುತಿದ್ದ ಕಳ್ಳನ ನಾಯಿ ಮನುಷ್ಯನ ಜಾಡು ಕಂಡು ಹಿಡಿದು ಒಂದು ಸಾರಿ ಬೊಗಳಿತು. ಅದರಿಂದ ಅವನು ಅಲ್ಲೇ ತುಸಹೊತ್ತು ನಿಂತು, ಸುಳಿವು ಹಿಡಿದು, ಮಾಧವನನ್ನು ಬಂಧಿಸಿದ. ಅವನನ್ನು ಕರೆದೊಯ್ದು ನಾಯಕನ ಮುಂದೆ ನಿಲ್ಲಿಸಲು, ಆತನು ಕತ್ತಿಯನ್ನು ಝುಳಿಪಿಸುತ್ತಾ "ಲೋ, ಮಂತ್ರದ ಕಾಟ ಬಿಡಿಸಿ ಮಂದೆಯನ್ನು ಅಟ್ಟು. ಇಲ್ಲದಿದ್ದರೆ ನಿನ್ನ ಗತಿ ನೆಟ್ಟಗಾಗದು" ಎಂದು ಭಯಪಡಿಸಿದ. ಅತೀವ ದುಃಖದಿಂದ ಮಾಧವ ಪಿಳ್ಳಂಗೋವಿಯನ್ನು ಊದುತ್ತಾ ತನ್ನ ಗೋವಿನ ಮಂದೆಯನ್ನು ಕಳ್ಳರ ಬಿಡಾರಕ್ಕೆ ಓಡಿಸಿದ. ಅಲ್ಲಿ ಅವರು ಆ ಹಸುಗಳನ್ನು ಒಂದು ದೊಡ್ಡಿಯಲ್ಲಿ ಕೂಡಿ, ಮಾಧವನನ್ನು ಒಂಟಿಯಾಗಿ ಮೈದಾನದಲ್ಲಿ ಬಿಟ್ಟುಬಿಟ್ಟರು.

ಕಳ್ಳರು ತಮ್ಮ ವಾಸಸ್ಥಾನವನ್ನು ಸೇರಿಕೊಂಡರು. ಇಂಥ ಒಳ್ಳೇ ರಾಶಿ ಹಸುಗಳನ್ನು ಸಂಪಾದಿಸಿದೆವಲ್ಲಾ ಎಂಬ ಸಂತೋಷದಿಂದ, ಅವರ ನಾಯಕನು "ಭಲಾ, ಭೆಷ್. ಬಲಿಷ್ಟವಾದ ಆ ಬಿಳಿ ಹಸುವನ್ನು ಕೊಂದು ಅಡಿಗೆ ಮಾಡಿ" ಎಂದು ಅಪ್ಪಣೆ ಮಾಡಿದ. ಆತನ ಮಾತಿನಂತೆ ಅನುಚರರು ಹಸುವನ್ನು

ಕೊಂಡು, ಪಸಂದಾಗಿ ಅಡಿಗೆ ಮಾಡಿ, ಎಲೆಗಳಲ್ಲಿ ಬಡಿಸಿದರು. ಇನ್ನೇನು ಊಟ ಮಾಡೋಣವೆಂದಾಗ ಒಂದು ವಿಚಿತ್ರ ನಡೆಯಿತು.

ಈ ಸಮಯದಲ್ಲೇ ಮೈದಾನದಲ್ಲಿ ಕುಳಿತಿದ್ದ ಮಾಧವ ಎಂದಿನಂತೆ "ಗಿಲಿಲಿಲಿ!....ಗಿಲಿಲಿಲಿ!!....ಗಿಲಿಲಿಲಿ!!!...." ಎಂದು ಹಾಡಲು, ಕೂಡಲೇ ದೊಡ್ಡಿಯಲ್ಲಿದ್ದ ಗೋವುಗಳೆಲ್ಲಾ ಹಠಾತ್ತನೆ ಹಗ್ಗಗಳನ್ನು ಹರಿದುಕೊಂಡು, ಗೋಡೆಗಳನ್ನು ಬೀಳಿಸಿ, ಮಾಧವನ ಮುಂದೆ ಬಂದು ಸೇರಿ, ಹಾಡನ್ನು ಕೇಳುತ್ತಾ ನಿಂತವು!

ನಾಯಕನ ಬಿಡಾರದಲ್ಲಿ ಅನುಚರರು ಸ್ವಹಸ್ತದಿಂದ ಅಡಿಗೆ ಮಾಡಿ ಬಡಿಸಿದ್ದ ಗೋಮಾಂಸ ಯಾರ ಎಲೆಯಲ್ಲೂ ಕಾಣಿಸದು! ಅದೃಶ್ಯವಾಗಿಬಿಟ್ಟಿದೆ. ಕೊಂದ ಬಿಳಿ ಹಸುವಿನ ಸುಳಿವು ಎಲ್ಲೂ ಕಾಣಿಸಲಿಲ್ಲ. ಎಲ್ಲಾ ಆಶ್ಚರ್ಯ ಹೊಂದಿದರು. ಕೂಡಲೇ ಅವರಿಗೆ ಒಂದು ಹಾಡು ಕೇಳಿಬಂತು. ಎಲ್ಲರೂ ಆ ದಿಕ್ಕಿಗೆ ಓಡಿದರು. ಮೈದಾನದಲ್ಲಿ ಮರದಮೇಲೆ ಮಾಧವ, ಅವನ ಸುತ್ತಲೂ ಆಲಿಸುತ್ತಿದ್ದ ಗೋವಿನ ಮಂದೆ ಕಾಣಿಸಿತು! ಸೂಕ್ಷ್ಮ ಪರಿಶೀಲಿಸಿ ನೋಡಲು, ಎಲೆಯಲ್ಲಿ ಬಡಿಸಿದ್ದ ಬಿಳಿಹಸು ಸಹಾ ಹಾಡು ಕೇಳುತ್ತಾ ನಿಂತಿದೆ! ಈ ದೃಶ್ಯಕಂಡು ಎಲ್ಲಾ ನಿಶ್ಚೇಷ್ಟಿತರಾದರು.

ಕಳ್ಳರ ನಾಯಕನು ಮಾಧವನ ಕಾಲುಗಳ ಮೇಲೆ ಬಿದ್ದು "ಎಲೈ ಹುಡುಗ. ನೀನು ಸಾಮಾನ್ಯನಲ್ಲ. ನಿಜವಾಗಿ ಮಂತ್ರಗಾರನೇ ಸರಿ. ಆ ಗೋಪಾಲ ಕೃಷ್ಣನೇ ನೀನು ನಿನ್ನ ಕೈಯಲ್ಲಿರುವುದು ಸಾಮಾನ್ಯ ಪಿಳ್ಳಂಗೋವಿಯಲ್ಲ. ಆ ಮುರಳಿ ಕೃಷ್ಣನು ಗಾನಮಾಡುವ ಮಹಿಮೆಯುಳ್ಳ ವೇಣು? ನಾವು ಮಾಡಿದ ತಪ್ಪು ಕೆಲಸಕ್ಕೆ ನಮ್ಮನ್ನು ಮನ್ನಿಸು ಮತ್ತೆಂದೂ ತುಂಬು ಜೀವಿಗಳ ಪ್ರಾಣವನ್ನು ತೆಗೆಯುವುದಿಲ್ಲ. ಬುದ್ಧಿ ಬಂತು. ಮನ್ನಿಸು" ಎಂದು ಪ್ರಾರ್ಥಿಸಿದ.

ನಾಯಕನು ಹೇಳಿದ ಈ ಮಾತುಗಳ ಅರ್ಥವೇನೂ ಆಗಲಿಲ್ಲ ಆ ಮುಗ್ಧ ಮಾಧವನಿಗೆ. ಆದುದರಿಂದ ಏನೊಂದೂ ಉತ್ತರ ಕೊಡಲಾರದಾದ. ಅವರು ಬಿಟ್ಟರೆ ಸಾಕೆಂದುಕೊಂಡು ಮತ್ತೆ ತನ್ನ ಮಂದೆಯನ್ನು ಅಟ್ಟಿಕೊಂಡು ಹೋಗಿ ಮನೆ ಸೇರಿಕೊಂಡ.






## 16

[ರಾಜಕುಮಾರಿಯರನ್ನು ಮೂಕರನ್ನಾಗಿ ಮಾಡಿ ಅರಣ್ಯದಲ್ಲಿ ಬಿಟ್ಟುಬಿಟ್ಟ ಮೇಲೆ ಪ್ರತಾಪರಾಜನು ಬಂದುನೋಡಿ ಅವರನ್ನು ಕರೆದುಕೊಂಡು ಹೋಗಿ ಕಾಪಾಡುತ್ತಿರುವನು ಅವರ ಆಸ್ಥಾನ ಚಿತ್ರಕಾರನ ಸಹಾಯದಿಂದ ಉದಯನನು ಒಬ್ಬ ಕಾವಲುಗಾರನ ವೇಷ ತಾಳಿ ಪಾತಾಳ ಗೃಹಕ್ಕೆ ಹೋಗಲು, ಬಾಗಿಲ ಹತ್ತಿರವಿದ್ದ ಸಿಂಹಗಳು ಆತನ ಮೇಲೆ ಬಿದ್ದವು. ಜೊತೆ ನೌಕರರು ಅವುಗಳನ್ನು ಕೊಂದು, ಆತನನ್ನು ರಕ್ಷಿಸಿದರು. ರಾಕ್ಷಸನು ಗರ್ಜಿಸುತ್ತಾ ಉದಯನನ ಹತ್ತಿರ ಬರುವವರೆವಿಗೂ ನೀವು ಓದಿದಿರಿ ಆತರುವಾಯ—]

ರಾಕ್ಷಸನು ಬೊಬ್ಬೆಯಿಟ್ಟ. "ಯಾರು ಈ ಕೆಲಸ ಮಾಡಿದ್ದು?" ಎಂದೆನ್ನುತ್ತಾ ಅವನು ತನ್ನ ಕಡೆಗೆ ಬರುತ್ತಿರುವುದನ್ನು ಕಂಡು ಉದಯನನು ಗಡಗಡನೆ ನಡುಗಿದನು. ಎಂತಹುದೋ ಒಂದು ಉತ್ತರ ಕೊಡೋಣವೆಂದಿರುವಲ್ಲಿ ರಾಕ್ಷಸನ ಪರಿವಾರದವರು ಲಗುಬಗನೆ ಅಲ್ಲಿಗೆ ಬಂದು ಸೇರಿದರು. ಸಿಂಹಗಳನ್ನು ಕೊಂದಾತ ಕೈ ಕಟ್ಟಿಕೊಂಡು "ನಾನೇ ಪ್ರಭೂ, ಈ ಕೆಲಸ ಮಾಡಿದ್ದು. ನಮ್ಮ ಭವನದಲ್ಲಿದ್ದುಕೊಂಡು, ನಮ್ಮ ಹದ್ದುಬಸ್ತಿನಲ್ಲಿ ಬೆಳೆಯುತ್ತಾ ಅವು ನಮ್ಮನ್ನೇ ಕೊಲ್ಲಲು ಪ್ರಯತ್ನಿಸಿದವು. ನಾನು ಆ ಸಮಯಕ್ಕೆ ಅಡ್ಡಬರದಿದ್ದರೆ, ಪಾಪ ಈವೇಳೆಗೆ ಈತನು ಯಮಲೋಕಕ್ಕೆ ಹೋಗಬೇಕಾಗಿತ್ತು" ಎಂದನು.

ಅದಕ್ಕೆ ರಾಕ್ಷಸನು "ಓ, ಹಾಗೋ. ಒಳ್ಳೇ ಕೆಲಸ ಮಾಡಿದೆ ಬಿಡು. ಈ ಸಿಂಹಗಳಿಗೆ ಸೊಕ್ಕೇರಿದಂತಿದೆ. ಉಳಿದ ಸಿಂಹಗಳಿಗೆ ಒಂದು ವಾರ ತಿಂಡಿ ಹಾಕದೆ ಉಪವಾಸ ಹಾಕಿ. ಅವೇ ದಾರಿಗೆ ಬರುತ್ತವೆ" ಎಂದು



ಅಲ್ಲಿಂದ ಸರಸರನೆ ಹೊರಟನು. ಅವನು ಹೋದನಂತರವೇ ಉದಯನನ ಮನಸ್ಸು ನೆಮ್ಮದಿ ಹೊಂದಿತು. ಏನೂ ಅರಿಯದವನಂತೆ ಮಲಗಿದ್ದರೂ, ಒಂದು ಕಣ್ಣಿನಿಂದ ರಾಕ್ಷಸನ ಚಲನವಲನಗಳನ್ನು ಸೂಕ್ಷ್ಮವಾಗಿ ಗಮನಿಸುತ್ತಲೇ ಇದ್ದನು.

ಪಡಸಾಲೆ ಕೊನೆಯಲ್ಲಿ ಒಂದು ದೊಡ್ಡ ದ್ವಾರದ ಹತ್ತಿರ ಹೋಗಿ ರಾಕ್ಷಸ ಸೊಂಟದಿಂದ ಚಿಕ್ಕ ಬೀಗದಕೈಯೊಂದನ್ನು ತೆಗೆದು, ಏನೋ ಮಂತ್ರ ಊದಿದ. ಮಂತ್ರ ಪಠಿಸಿದ್ದು ಪೂರ್ತಿಯಾದಕೂಡಲೇ ಆ ಚಿಕ್ಕ ಬೀಗದಕೈ ಏಳು ಅಡಿ ಉದ್ದ ಬೆಳೆದು ಬಿಟ್ಟಿತು! ಆಗ ರಾಕ್ಷಸನು ಅದರಿಂದ ಆ ದ್ವಾರದ ಬಾಗಿಲುಗಳನ್ನು ತೆರೆದು ಒಳಕ್ಕೆ ಪ್ರವೇಶಿಸಿದನು.

ಉದಯನನು ಒಳಗೇನಿರುವುದೋ ಹೋಗಿ ನೋಡೋಣವೆಂದು ಯೋಚಿಸಿದನು. ಆದರೆ ಸಿಕ್ಕಿಬಿದ್ದರೆ ಪ್ರಾಣ ಉಳಿಯದು. ಆದ್ದರಿಂದ ಏನು ನಡೆಯುವುದೋ ಎಂದು ಜಾಗರೂಕತೆಯಿಂದ ನೋಡುತ್ತಾ ಮಲಗಿದ್ದನು.

ಮತ್ತೆ ಸ್ವಲ್ಪ ಹೊತ್ತಿಗೆಲ್ಲಾ ರಾಕ್ಷಸ ಹೊರಗೆ ಬಂದು ಯಥಾಪ್ರಕಾರ ಬಾಗಿಲು ಮುಚ್ಚಿಬಿಟ್ಟನು. ಮತ್ತೆ ಮಂತ್ರ ಪಠಿಸಿದ ಕೂಡಲೇ ಬೀಗದಕೈ ಪುನಃ ಚಿಕ್ಕದಾಯಿತು. ಅದನ್ನು ಸೊಂಟದಲ್ಲಿ ಸಿಕ್ಕಿಸಿಕೊಂಡು ರಾಕ್ಷಸನು ಬಂದ ದಾರಿಯಲ್ಲೇ ಪಾತಾಳ ಗೃಹದಿಂದ ಹೊರಕ್ಕೆ ಹೋದನು.

ಆತನ ಪರಿವಾರದವರು ಮತ್ತೆ ತಮ್ಮ ತಮ್ಮ ಸ್ಥಳಗಳಿಗೆ ಹೋಗಿ ಗೊರಕೆ ಹೊಡೆಯುತ್ತಾ ಮಲಗಿಕೊಂಡರು. ಈ ಸಮಯ ನೋಡಿ ಉದಯನನು ಮೆಲ್ಲನೆದ್ದು ರಾಕ್ಷಸನು ತೆರೆದು ಮುಚ್ಚಿದ್ದ ದೊಡ್ಡದ್ವಾರದ ಹತ್ತಿರ ಹೋದ. ಬೀಗದಕೈ ತೂರಿಸುವ ಕಿಂಡಿಯಿಂದ ಇಣಿಕಿ ನೋಡಿದ. ಅಲ್ಲಿನ ದೃಶ್ಯ ಕಂಡು ಉದಯನನು ತನ್ನ ಕಣ್ಣುಗಳನ್ನು ತಾನೇ ನಂಬಲಾರದೆ ಹೋದ. ಏಕೆಂದರೆ ತಾನು ಯಾರನ್ನು ಕಾಣಬೇಕೆಂದು ತವಕಿಸುತ್ತಿದ್ದನೋ ಆ ಗಡ್ಡದವನು ಅಲ್ಲಿ ತಲೆ ಕೆಳಗಾಗಿ ನೇತಾಡುತ್ತಿದ್ದಾನೆ! ಸಂಧ್ಯಾನಿಶೀಥರು ಮಾತ್ರ ಕಾಣಬರಲಿಲ್ಲ.

ಇದನ್ನು ಕಂಡು ಉದಯನನಿಗೆ ಭಯ ಆಶ್ಚರ್ಯಗಳುಂಟಾದವು. ಸೋದರರು ಏನಾದಹಾಗೆ? ಗಡ್ಡದವನನ್ನು ಭೇಟಿ ಮಾಡಿ

ದರೆ ತಿಳಿದುಕೊಳ್ಳಬಹುದು. ಆದರೆ ಆ ಬೀಗದಕೈಯಿಲ್ಲದೆ ಒಳಗೆ ಪ್ರವೇಶಿಸುವುದಾದರೂ ಹೇಗೆ? ಅವನಿಗೇನೂ ತೋರದಾಯಿತು.

ಹಾಗೇ ತುಸಹೊತ್ತು ದ್ವಾರದ ಹತ್ತಿರ ನಿಂತಿದ್ದ. ಬುದ್ಧಿಗೆ ಏನೂ ಹೊಳೆಯದಂತಾಗಲು, ಬೇಸರಗೊಂಡು ತನ್ನ ಸ್ಥಳಕ್ಕೆ ಬಂದು ಮಲಗಿಕೊಂಡ. ಮಲಗಿದರೆ ನಿದ್ದೆ ಬಂದರಲ್ಲವೇ! ಆ ಕೋಣೆಯೊಳಗೆ ಹೇಗೆ ಪ್ರವೇಶಿಸುವುದು? ಗಡ್ಡದವನನ್ನು ಸಂಧಿಸುವುದು ಹೇಗೆ? ಸಹೋದರರು ಏನಾದರು? ರಾತ್ರಿಯೆಲ್ಲಾ ಇದೇ ಯೋಚನೆ.

ಬೆಳಗಾಯಿತು. ರಾತ್ರಿ ಕಾವಲು ಕಾಯುತ್ತಿದ್ದ ಪಡೆ ಮತ್ತೆ ಪಾತಾಳ ಗೃಹವನ್ನು ಸೇರಿಕೊಂಡರು. ಅವರು ಬಂದ ಕೂಡಲೇ ಇಲ್ಲಿದ್ದ ಪಹರೆಯವರು ಕೊಳದ ಹತ್ತಿರಕ್ಕೆ ಹೊರಟರು.

ಆ ಕೋಣೆಯಲ್ಲಿ ಪ್ರವೇಶಿಸುವ ಬೇರೆ ಮಾರ್ಗ ಯಾವುದಾದರೂ ಇದೆಯೆ?' ಎಂದು ಪರಿಚಾರಿಕರನ್ನು ಕೇಳಿ ತಿಳಿದು ಕೊಳ್ಳೋಣವೆಂದು ಯೋಚಿಸಿದ ಉದಯನ. ಈ ಪ್ರಶ್ನೆ ಕೇಳಿದ ಕೂಡಲೇ ತನ್ನ ವೇಷ ಎಲ್ಲಿ ಬಯಲಾಗುವುದೋ, ಎಲ್ಲಿ ಸಿಕ್ಕಿ ಬೀಳುವೆನೋ ಎಂಬ ಭಯವುಂಟಾಯಿತು. ಆದುದರಿಂದ ಅವನು ಆ ಯೋಚನೆ ಬಿಟ್ಟುಬಿಟ್ಟನು.

ಮತ್ತೊಂದು ವಾರ ಕಳೆಯಿತು. ರಾಕ್ಷಸ ಮತ್ತೆ ಬಂದ. ಹಿಂದಿನ ಸಾರಿ ಮಾಡಿದಂತೆಯೇ ಸೊಂಟದಿಂದ ಬೀಗದಕೈ ತೆಗೆದು



ಮಂತ್ರ ಹಾಕಿ, ದೂಡ್ಡದಾಗಿ ಮಾಡಿದ. ಕೊಠಡಿಯ ಬಾಗಿಲುಗಳನ್ನು ತೆಗೆದು ಒಳಗೆ ಪ್ರವೇಶಿಸಿದ. ಉದಯನನೂ ಸಹ ಅವನೊಂದಿಗೆ ಯುಕ್ತಿಯಿಂದ ಬಾಗಿಲು ದಾಟಿ ಒಳಕ್ಕೆ ಹೆಜ್ಜೆಯಿಟ್ಟ. ಬಾಗಿಲಿಗೆ ಪಕ್ಕದಲ್ಲಿ ಒಂದಾಳಿನಷ್ಟು ಎತ್ತರವಿರುವ ಮೂರು ದೊಡ್ಡದೊಡ್ಡ ಮಡಕೆಗಳೂ, ಅವುಗಳಮೇಲೆ ಮುಚ್ಚಳಗಳೂ ಇದ್ದವು. ಮೊದಲನೇದರ ಮೇಲಿನ ಮುಚ್ಚಳ ತೆಗೆದ ಉದಯನ. ಅದರಲ್ಲಿ ಯಾರೋ ಮನುಷ್ಯನಿರುವಂತೆ ಕಂಡುಬರಲು ತಟಕ್ಕನೆ ಮುಚ್ಚಿಬಿಟ್ಟ. ಎರಡನೇ ಮಡಕೆಯ ಮುಚ್ಚಳ ತೆಗೆದು ನೋಡಿದ. ಅದರಲ್ಲೂ ಅಷ್ಟೇ. ಅದನ್ನೂ ಮುಚ್ಚಿಬಿಟ್ಟ. ಮೂರನೇ ಮಡಕೆ ತೆಗೆದು ನೋಡಿದ. ಅದು ಖಾಲಿಯಾಗಿತ್ತು. ಕೊಂಚವಾದರೂ ಸದ್ದಾಗ

ದಂತೆ ಅದರಲ್ಲಿ ಇಳಿದು ಮುಚ್ಚಳ ಮೇಲೆ ಎಳೆದುಕೊಂಡು ಕುಳಿತ. ಇದೆಲ್ಲಾ ನಡೆಯುವ ಸಮಯದಲ್ಲಿ ರಾಕ್ಷಸನು ಎಲ್ಲಿಗೆ ಹೋದನೋ ಏನೋ ಉದಯನನಿಗೆ ತಿಳಿಯದು.

ಸ್ವಲ್ಪ ಹೊತ್ತಾದನಂತರ ಆ ರಾಕ್ಷಸನು ಆ ಮಡಕೆಗಳ ಹತ್ತಿರ ಬಂದು 'ಒಂದು' ಎಂದು ಕೂಗುತ್ತಾ ಮೊದಲನೇ ಮುಚ್ಚಳ ತೆಗೆದ. ಒಳಗಿದ್ದ ಮನುಷ್ಯ ಎದ್ದು ನಿಂತ. ರಾಕ್ಷಸನು ಅವನ ಜುಟ್ಟು ಹಿಡಿದುಕೊಂಡು ಹೊರಗೆಳೆದ. ತರುವಾಯ 'ಎರಡು' ಎಂದು ಕಿರಿಚಿ, ಎರಡನೇ ಮಡಕೆಯ ಮುಚ್ಚಳ ತೆಗೆದ. ಅದರಲ್ಲಿದ್ದ ಮನುಷ್ಯ ಸಹ ಎದ್ದು ನಿಲ್ಲಲು ಅವನನ್ನೂ ಸಹ ಜುಟ್ಟು ಹಿಡಿದು ಹೊರಕ್ಕೆ ಎಳೆದ. ಕೂಡಲೇ ಅವರನ್ನು ಸಂಗಡ ಕರೆದುಕೊಂಡು ಕೊಠಡಿಯ ಆಚೆ ಬಂದುಬಿಟ್ಟ. ಬಾಗಿಲುಗಳನ್ನು ಎಂದಿನಂತೆ ಮುಚ್ಚಿ, ಬೀಗದ ಕೈಯನ್ನು ಸೊಂಟಕ್ಕೆ ಸಿಕ್ಕಿಸಿದ. ಅವರಿಬ್ಬರನ್ನೂ ತಲಾ ಒಂದೊಂದು ಹಿಡಿಯಲ್ಲಿ ಹಿಡಿದುಕೊಂಡು ಪಾತಾಳ ಗೃಹದಿಂದ ಹೊರಬಿದ್ದ.

ಉದಯನನು ಕ್ಷಣವಾದರೂ ತಡಮಾಡಲಿಲ್ಲ. ಕೂಡಲೇ ಮಡಕೆಯ ಮುಚ್ಚಳ ತೆಗೆದು ಹೊರಗೆ ಬರಲು ಯತ್ನಿಸಿದ. ಆದರೆ ಹೊರಗೆ ಬರುವುದು ಇಳಿದಷ್ಟು ಸುಲಭವಾಗಿ ಕಾಣಿಸಲಿಲ್ಲ. ಒಂದು ಸಾರಿ ಜಿಗಿದ. ಆದರೆ ಅಷ್ಟು ಎತ್ತರ ಹಾರಲಾರದೆ ಹೋದ. ಮಡಕೆಯ ಅಂಚು ಕಾಲಿಗೆ ತಗಲಿ, ಅದರೊಂದಿಗೆ ಕೆಳಗೆ






ಬಿದ್ದ, ಬಿದ್ದಕೂಡಲೇ ಮಡಕೆ ಚೂರು ಚೂರಾಯಿತು.

ಈ ರೀತಿ ಉದಯನನು ಮಡಕೆಯಿಂದ ಹೊರಬಿದ್ದ. ಹತ್ತಿರದಲ್ಲೇ ಗಡ್ಡದವನು ನೇತಾಡುತ್ತಿರುವುದು ಕಾಣಿಸಲು, ಫಕ್ಕನೆ ಅವನ ಹತ್ತಿರಕ್ಕೆ ಓಡಿ, "ಇದೇನಯ್ಯಾ ಈ ಶಿಕ್ಷೆ? ನನ್ನ ಸಹೋದರರು ಏನಾದರು? ಹೇಳು. ರಾಕ್ಷಸನು ಮತ್ತೆ ಬರುವ ಮೊದಲು ನಾನು ಹೋಗಬೇಕು. ಹೇಳು, ಬೇಗಹೇಳು" ಎಂದು ಚಡಪಡಿಸಿದ.

ಉದಯನನು ಮಾರುವೇಷದಿಂದ ಬಂದಿರುವನೆಂದು ಗಡ್ಡದವನು ಕ್ಷಣಮಾತ್ರದಲ್ಲಿ ಗ್ರಹಿಸಿದ. "ನೀನೇನಯ್ಯಾ. ಗಾಬರಿಪಡಬೇಡ. ಅವನು ಇನ್ನೊಂದು ವಾರದವರೆವಿಗೂ ಬರುವುದಿಲ್ಲ. ಮೊದಲು ನನ್ನ ಕಟ್ಟುಗಳನ್ನು ಬಿಚ್ಚು ಹೇಳುತ್ತೇನೆ" ಎಂದ.

ಉದಯನನು ಗಡ್ಡದವನ ಕಟ್ಟುಗಳನ್ನು ಬಿಚ್ಚಿದ. ಬಂಧವಿಮುಕ್ತನಾದ ಮೇಲೆ ಗಡ್ಡದವನು ಈ ರೀತಿ ಹೇಳಿದ.

"ನೀನು ಒಳಗೆ ಪ್ರವೇಶಿಸಿದ್ದೂ, ಮುಚ್ಚಳ ತೆಗೆದದ್ದೂ ಎಲ್ಲಾ ನಾನು ಗಮನಿಸುತ್ತಲೇ ಇದ್ದೆ. ಆ ಎರಡು ದೊಡ್ಡ ಮಡಕೆಗಳಲ್ಲಿ ನೀನು ಕಂಡ ಮನುಷ್ಯರು ಯಾರೆಂದು ತಿಳಿದೆ? ಅವರೇ ನಿನ್ನ ಸಹೋದರರು. ಸಧ್ಯ, ಆ ರಾಕ್ಷಸ ಮೂರನೇ ಮಡಕೆಯ ಮುಚ್ಚಳ ತೆಗೆಯಲಿಲ್ಲ. ತೆಗೆದಿದ್ದರೆ ನಿನ್ನ ಗತಿ ಏನಾಗುತಿತ್ತೋ ಯಾರಿಗೆ ಗೊತ್ತು?" ಎಂದು ಇನ್ನೂ ಏನೋ ಹೇಳುವಷ್ಟರಲ್ಲಿ ಉದಯನನು ಮಧ್ಯೆ ಬಾಯಿ ಹಾಕಿ 'ಏನು, ಅವರು ನನ್ನ ಸಹೋದರರೇ? ಸಂಧ್ಯಾ ನಿಶೀಥರೇ? ಮೊದಲು ಅವರನ್ನು ಬಿಡಿಸೋಣ ಬಾ" ಎಂದ.

ಗಡ್ಡದವನು ಪಕಪಕನೆ ನಗುತ್ತಾ "ಎಲೆ ಹುಚ್ಚಾ, ಅವರಿನ್ನೂ ಅಲ್ಲೇ ಇದ್ದಾರೆಂದು ಎಣಿಸಿರುವೆಯಾ? ಒಂದು-ಎರಡು-ಎಂದು ಅವನು ಕೂಗಿದ್ದು ಕೇಳಿಸಲಿಲ್ಲವೇ? ಅವರನ್ನು ಮಡಕೆಯಿಂದ ಹೊರಗೆಳೆದು ತನ್ನೊಂದಿಗೆ ಕರೆದುಕೊಂಡು ಹೋದ" ಎಂದ.

"ಎಲ್ಲಿಗೆ?" ಎಂದ ಉದಯನ.

"ನನಗೂ ತಿಳಿಯದು. ಬಹುಶಃ ಅವರನ್ನು



ಮರೆಮಾಚುತ್ತಿರುವೆವೆಂದೂ, ಆ ವಿಷಯ ಬಯಲು ಮಾಡಿದಹೊರತು ನಮ್ಮನ್ನು ನಾನಾ ಯಾತನೆಗಳಿಗೆ ಗುರಿಮಾಡುವೆನೆಂದು ಬೆದರಿಸಿದ ಆ ರಾಕ್ಷಸ. ಆದರೆ ನಾವು ಆ ಬೆದರಿಕೆಗೆ ಸೊಪ್ಪು ಹಾಕಲಿಲ್ಲ. ಆಗ ಅವನು ನಾವು ಮೂವರನ್ನೂ ಆ ಮಡಕೆಗಳಲ್ಲಿ ಬಂಧಿಸಿದ. ಆಗಲೂ ನಾನು ರಹಸ್ಯವನ್ನು ಬಯಲು ಮಾಡದಿರಲು ನನ್ನನ್ನು ಈ ರೀತಿ ನೇತು ಹಾಕಿದ. ಆದರೂ ನಾನು ಒಂದೇ ಹಠದಿಂದ ನಿನ್ನ ಸಮಾಚಾರ ನನಗೆ ತಿಳಿಯದೆಂದು ಹೇಳುತ್ತಲೇ ಬಂದೆ. ನನ್ನನ್ನು ಮಾಡಿದಂತೆಯೇ ಅವರನ್ನೂ ಮಾಡುವನೆಂದು ಕೊಂಡಿದ್ದೆ. ಆದರೆ ಏಕೋ ಹಾಗೆ ಮಾಡಲಿಲ್ಲ. ಅವರನ್ನು ಎಲ್ಲಿಗೆ ಕರೆದುಕೊಂಡು ಹೋದನೋ ನಾನರಿಯೆ" ಎಂದ.

ತರುವಾಯ ಉದಯನನು ತಾನು ಯಾವ ವಿಧವಾಗಿ ಮಾರು ವೇಷ ಹಾಕಿಕೊಂಡು ಆ ಸ್ಥಳಕ್ಕೆ ಬಂದುದನ್ನು ನಿಧಾನವಾಗಿ ತಿಳಿಯಪಡಿಸುತ್ತಾ, ಭಸ್ಮ ಮತ್ತು ಅಂಜನಗಳನ್ನು ಹಾಳು ಮಾಡಿಕೊಂಡ ವಿಷಯವನ್ನೂ ಸಹ ಹೇಳಿದ.

ಎಲ್ಲಾ ಕೇಳಿ ಗಡ್ಡದವನು "ಅವುಗಳನ್ನು ಆ ರಾಜನೇ ಲಪಟಾಯಿಸಿರಬೇಕು. ಇದು ಖಂಡಿತ. ಯಾವುದೋ ಒಂದು ಉಪಾಯದಿಂದ ಇಲ್ಲಿಂದ ಹೊರಬಿದ್ದರೆ, ಆ ರಾಜನ ಹತ್ತಿರ ಹೋಗಿ ಅವುಗಳನ್ನು ಪುನಃ ಪಡೆಯುವ ಮಾರ್ಗ ನೋಡಬೇಕು" ಎಂದ.

ಕೊಳದಲ್ಲಿ ಬಿಟ್ಟು ಕಾವಲುಗಾರರ ವಶಕ್ಕೆ ಒಪ್ಪಿಸಬಹುದು" ಎಂದ ಗಡ್ಡದವ.

"ಸರಿ, ಮೊದಲು ಈ ವಿಷಯ ಹೇಳು. ಏಕೆ ನಿನ್ನನ್ನು ಈ ರೀತಿ ತಲೆಕೆಳಗಾಗಿ ನೇತು ಹಾಕಿದ್ದಾನೆ? ಯಾತಕ್ಕಾಗಿ ಅವರನ್ನು ಆ ಮಡಕೆಗಳಲ್ಲಿಟ್ಟಿದ್ದ? ಅಂದು ನಿಮ್ಮನ್ನು ಪಾತಾಳ ಗೃಹಕ್ಕೆ ಕರೆತಂದಮೇಲೆ ನಡೆದ ವಿಷಯವಾದರೂ ಏನು?" ಎಂದು ಪ್ರಶ್ನೆ ಮಾಡಿದ ಉದಯನ.

ಅದಕ್ಕೆ ಗಡ್ಡದವನು "ಮುಂಚೆ ಹಿಡಿದಿರುವ ಆ ಮಡಕೆ ಚೂರುಗಳನ್ನು ಬಚ್ಚಿಡಬೇಕು. ತರುವಾಯ ಮಿಕ್ಕ ವಿಚಾರ ಹೇಳುವೆನು" ಎಂದು, ಆ ಬೋಕಿಗಳನ್ನು ಎತ್ತಿದ. ತರುವಾಯ ಅವನು ಈ ರೀತಿ ಹೇಳಿದ. "ನೀನು ಹೋದ ಜಾಗ ನಮಗೆ ತಿಳಿದಿದ್ದೂ ಸಹ ನಾವು

ಅದೇಪ್ರಕಾರ ಗಡ್ಡದವನೂ, ಉದಯನನೂ ಸೇರಿ ಯೋಚನೆ ಮಾಡ ಹತ್ತಿದರು.

* * *

ಇದು ಈ ರೀತಿಯಿರುವಲ್ಲಿ, ಅಲ್ಲಿ ಮಾಳವ ದೇಶದ ರಾಜನಾದ ಪ್ರತಾಪನ ಅರಮನೆ ಯಲ್ಲಿ ನಮ್ಮ ರಾಜಕುಮಾರಿಯರು ವರೂವರೂ ಹೇಗಿರುವರೋ ಒಂದು ಸಾರಿ ನೋಡೋಣ:

ಉದಯನನು ನಾಳೆ ಹೊರಟು ಹೋಗುವ ನೆಂದಾಗ ಆ ರಾತ್ರಿ ಆತನು ಗಾಢ ನಿದ್ದೆ ಯಲ್ಲಿರುವುದನ್ನು ಕಂಡು ಪ್ರತಾಪನು ಭಸ್ಮ ಮತ್ತು ಅಂಜನಗಳನ್ನು ಲಪಟಾಯಿಸಿ, ಏನೂ ತಿಳಿಯದವನಂತೆ ಸುಮ್ಮನಿದ್ದ. ಮಾರನೆಯ ದಿನ ಉದಯನನು ಹೊರಟು ಹೋದ ಕೂಡಲೇ ತಾನೇ ಸ್ವತಃ ರಾಜಕುಮಾರಿಯ ರನ್ನು ಹತ್ತಿರಕ್ಕೆ ಕರೆದು ಅಂಜನಗಳನ್ನೂ, ಭಸ್ಮಗಳನ್ನೂ ಪ್ರಯೋಗಿಸಿ ಅವರ ಅಂಗ ವಿಕಲತೆಯನ್ನು ಹೋಗಲಾಡಿಸಿದ. ಈಗ ಅವರು ತಮ್ಮ ನಿಜರೂಪಗಳಲ್ಲಿ ಕಾಣಿಸಲು, ಅವರ ರೂಪಸೌಂದರ್ಯಗಳನ್ನು ಕಂಡು ತನ್ಮಯನಾದ. "ನನ್ನನ್ನು ವಿವಾಹ ಮಾಡಿ ಕೊಳ್ಳಿ" ಎಂದು ರಾಜನು ಅವರನ್ನು ಕೋರಿದ. ರಾಜಕುಮಾರಿಯರು ಒಪ್ಪಿಕೊಳ್ಳ ಲಿಲ್ಲ. ಪ್ರಾರ್ಥಿಸಿದ. ಲಾಭವಿಲ್ಲದಾಯಿತು. ಬೆದರಿಸಿ ನೋಡಿದ. ಊಹೂ. ಇದು ಸರಿ ಯಲ್ಲವೆಂದುಕೊಂಡು" ವಿವಾಹ ಮಾಡಿಕೊಂ ಡರೆ ಸರಿಹೋಯಿತು. ಇಲ್ಲ, ಒಪ್ಪಿಕೊಳ್ಳುವ ವರೆವಿಗೂ ಕಾರಾಗಾರದಲ್ಲಿ ಕೂಡಿಹಾಕುವೆ'



ಎಂದು ಅವರನ್ನು ಬಂಧಿಸಿದ. ಅನಿರೀಕ್ಷಿತ ವಾಗಿ ಈ ಅವಾಂತರ ಬಂದು ಒದಗಿದ್ದಕ್ಕೆ ರಾಜಕುಮಾರಿಯರು ದುಃಖದಿಂದ ಕೊರಗ ಹತ್ತಿದರು.

* * *

ರಾಕ್ಷಸನ ಸಂಗಡ ಹೊರಟ ಸಂಧ್ಯಾ ನಿಶೀಥರ ವಿಷಯವೇನಾಯಿತು ಗೊತ್ತೇ? ಅವ ರಿಬ್ಬರನ್ನೂ ಕೊಳದ ಹತ್ತಿರಕ್ಕೆ ಕರೆದುಕೊಂಡು ಹೋದ. "ಕೊನೆಯ ಸಾರಿ ನಿಮಗೆ ಅವ ಕಾಶಕೊಡುತ್ತಿದ್ದೇನೆ. ನಿಮ್ಮ ಸಹೋದರನು ಎಲ್ಲಿಗೆ ಓಡಿಹೋದನೋ ಈಗಲಾದರೂ ನಿಜ ಹೇಳಿ. ಇಲ್ಲದಿದ್ದಪಕ್ಷಕ್ಕೆ ನಿಮ್ಮ ತಲೆ ಹಾರಿಸು ವೆನು" ಎಂದು ಗಂಡುಗೊಡಲಿಗಳಿಂದ ಸಿದ್ಧ ರಾಗಿದ್ದ ಭಟರನ್ನು ತೋರಿಸಿದ. ಸಂಧ್ಯಾ ನಿಶೀಥರು ಒಂದು ಕ್ಷಣ ದಿಙ್ಮೂಢರಾಗಿ

ನಿಂತುಬಿಟ್ಟರು. ಆಗ ನಿಶೀಥನು "ಅಯ್ಯಾ ಅವನು ಎಲ್ಲಿಗೆ ಹೋದನೋ ಏನಾದನೋ ನಮಗೆ ತಿಳಿಯದು. ಆದರೆ ಇಲ್ಲಿಂದ ಹೊರ ಬಿದ್ದರೆ ಹೇಗೋ ಒಂದು ರೀತಿ ಕಷ್ಟಪಟ್ಟು ಅವನನ್ನು ಹುಡುಕಿ ಭೇಟಿ ಮಾಡುವೆವೆಂಬ ಆಶೆಯಿದೆ. ಆದುದರಿಂದ ನಮ್ಮ ಮಾತಿನಲ್ಲಿ ನಂಬಿಕೆಯಿಟ್ಟು ನಮ್ಮನ್ನು ಬಿಡುಗಡೆ ಮಾಡು. ತರುವಾಯ ನಮ್ಮ ಸಹೋದರನೊಂದಿಗೆ ಮತ್ತೆ ಬರುವೆವು" ಎಂದ.

"ಭಲಾ, ಭಲಾ, ಒಳ್ಳೇ ಉಪಾಯ ಹೇಳಿದೆ. ನೋಡು, ನಿಮ್ಮ ಕಳ್ಳ ಆಟಗಳು ನನ್ನ ಹತ್ತಿರ ನಡೆಯಲಿಕ್ಕಿಲ್ಲ. ಹಿಂದೆ ನೀವು ಮಾಡಿದ ಮೋಸಗಳನ್ನು ಮರೆತೆನೆಂದು ಕೊಂಡಿರುವಿರೇನು? ನೀನಿಲ್ಲಿಗೆ ಮತ್ತೆ ಬರುವೆ ಎಂಬುದಕ್ಕೆ ನಂಬಿಕೆಯಾದರೂ ಏನು?" ಎಂದ ರಾಕ್ಷಸ.

ಅದಕ್ಕೆ ನಿಶೀಥನು, ಸಂಧ್ಯನನ್ನು ತೋರಿಸುತ್ತಾ "ಹಾಗಾದರೆ ಇವನನ್ನು ನಿನ್ನ ಹತ್ತಿರವೇ ಬಂಧಿಸಿಟ್ಟುಕೋ. ನಿನಗಾಗಿ ಅಲ್ಲದಿದ್ದರೂ, ನಮ್ಮ ಸಹೋದರನನ್ನು ಬಿಡಿಸಿಕೊಳ್ಳಲೋಸುಗವಾದರೂ ನಾವು ಮತ್ತೆ ನಿನ್ನ ಹತ್ತಿರಕ್ಕೆ ಬಂದೇ ತೀರಬೇಕಾಗುತ್ತದೆ" ಎಂದ.

"ಸರಿ. ಮತ್ತೊಂದು ವಿಷಯ. ಮುಖ್ಯವಾಗಿ ನಿಮ್ಮ ಸಹೋದರನನ್ನು ಹಿಡಿಯಬೇಕೆಂದಿರುವುದು ಯಾಕೆ ಗೊತ್ತೇ? ಮುಖ್ಯವಾದ ಭಸ್ಮಗಳೂ, ಅಂಜನಗಳೂ ಅವನ ಹತ್ತಿರ ಉಳಿದುಬಿಟ್ಟದೆ. ಅವು ಆತನ ಹತ್ತಿರವಿರುವವರೆವಿಗೂ ನನಗೆ ಸಿದ್ಧಿಯೇ ಬರುವುದಿಲ್ಲ. ಆದ್ದರಿಂದ ಆತನೇ ಬರಬೇಕಾಗಿಲ್ಲ. ನೀನಾದರೂ ಆ ಭಸ್ಮ, ಅದೂ ತಂದೂ ಕೊಟ್ಟರೆ ಸಾಕು. ಎಂದು ನೀನು ಈ ಕೆಲಸ ಮಾಡಿ ಕೊಡುವೆಯೋ ಅಂದೇ ನಿನ್ನ ಈ ಸಹೋದರನನ್ನು ಬಂಧ ವಿಮುಕ್ತನನ್ನಾಗಿ ಮಾಡುವೆನು, ತಿಳಿಯಿತೇ?" ಎಂದ ರಾಕ್ಷಸ.

ಸಂಧ್ಯ ಈ ಪದ್ಧತಿಗೆ ಒಪ್ಪಿಕೊಂಡ. ನಿಶೀಥ ಹೊರಟ. ಮಿಕ್ಕ ಹಂಸಗಳೊಂದಿಗೆ ಸಂಧ್ಯಾಕುಮಾರನನ್ನೂ ಸಹ ಕೊಳದಲ್ಲಿರಿಸುವಂತೆ ಹೇಳಿ, ಭಟರಿಗೆ ಒಪ್ಪಿಸಿ ರಾಕ್ಷಸನು ಹೊರಟು ಹೋದ. [ಇನ್ನೂ ಇದೆ]






ಮೊಗಲ್ ಚಕ್ರವರ್ತಿಯಾದ ಅಕ್ಬರ್ ಬಾದಷಹನಿಗೆ ಅಬುಲ್ ಫಜಲ್ ಎಂಬ ಆಪ್ತ ಮಂತ್ರಿಯೊಬ್ಬನಿದ್ದನು. ಅಬುಲ್ ಫಜಲ್ ಚಕ್ರವರ್ತಿಗೆ ಬಲಭುಜದಂತೆ ಇದ್ದ. ಆತನ ಮಾತಿಗೆ ತುಂಬಾ ಬೆಲೆಯಿತ್ತು.

ಒಂದು ದಿನ ಬಾದಷಹನು ತುಂಬಾ ಸಂತೋಷ ಚಿತ್ತದಲ್ಲಿರುವುದನ್ನು ಕಂಡು, ಅತನು ಈ ರೀತಿ ಬಿನ್ನವಿಸಿಕೊಂಡ. "ಸ್ವಾಮಿ, ತಮ್ಮ ಪರಿಪಾಲನೆಯಲ್ಲಿ ಎಲ್ಲವೂ ಸುಗಮವಾಗಿ ಸಾಗುತ್ತಿದೆ. ಪ್ರಜೆಗಳೆಲ್ಲ ಸುಖವಾಗಿದ್ದಾರೆ. 'ಅಕ್ಬರ್ ಚಕ್ರವರ್ತಿಯಂಥ ದಯಾಶೀಲನನ್ನು ಮತ್ತೆಲ್ಲೂ ನೋಡಲಾರೆವು. ಆತನ ರಾಜ್ಯದಲ್ಲಿ ಜನ್ಮವೆತ್ತಲು ಪುಣ್ಯಪಡೆದಿರಬೇಕು' ಎಂದು ಹಿರಿಕಿರಿಯರೆಲ್ಲರೂ ಹೇಳಿಕೊಳ್ಳುತ್ತಿರುವರು. ಈ ವಿಧವಾಗಿ ಮಹಾಸ್ವಾಮಿಯವರನ್ನು ಕೀರ್ತಿಕಾಂತೆ ವರಿಸಿರುವುದೇನೋ ಸೊಗಸಾಗಿದೆ. ಆದರೆ...." ಎಂದು ಸುಮ್ಮನಿದ್ದುಬಿಟ್ಟ.

"ಆದರೆ ...ಏನು? ಸಂಶಯ ಪಡದೆ ಹೇಳಯ್ಯ ಫಜಲ್" ಎಂದ ಬಾದಷಹ. ಆಗ ಅಬುಲ್ ಫಜಲ್ ಮಾತು ಮುಂದುವರಿಸಿದ "ಪ್ರಭೂ, ಯುವರಾಜರಾದ ಸಲೀಮ್, ನಮ್ಮ ಆಸ್ಥಾನ ನರ್ತಕಿ ಅನಾರ್ಕಲಿಯಮೇಲೆ ಮೋಹಗೊಂಡಂತೆ ತಿಳಿದು ಬಂದಿದೆ. ಆಕೆಯನ್ನು ವಿವಾಹವಾಗಲಿರುವರೆಂತಲೂ ಸುದ್ಧಿ ಬಂತು. ಈ ಮಾತು ಸತ್ಯವೇ ಆದರೆ, ಪ್ರಭುಗಳಿಗೆ ಎಂಥ ಅಪಕೀರ್ತಿ! ಇದುವರೆವಿಗೆ ಸಂಪಾದಿಸಿದ ಕೀರ್ತಿಯೆಲ್ಲಾ ನಿಮಿಷ ಮಾತ್ರದಲ್ಲಿ ನಾಶವಾಗುವುದಲ್ಲಾ? ಅಲ್ಲ, ಇಂತಹ ಕುಲಹೀನಳನ್ನು ವಿವಾಹವಾಗುವುದರಿಂದ ವಂಶಕ್ಕೆ ಕಲಂಕ ತಂದುಕೊಂಡಂತೆ ಆಗುವುದಿಲ್ಲವೇ! ಅಷ್ಟೇ ಅಲ್ಲದೆ, ಪ್ರಜೆಗಳು ದಂಗೆ ಏಳುವರೋ ಏನೋ ಈ ಸಮಸ್ಯೆಗಳಿಂದ ನನ್ನ ಹೃದಯ ತತ್ತರಗೊಂಡಿದೆ" ಎಂದು ಮನಸ್ಸಿನಲ್ಲಿದ್ದ ವೇದನೆ ತೋಡಿಕೊಂಡ.

ತೀವ್ರವಾಗಿ ಆಲೋಚಿಸಿದ ಅಕ್ಬರ್. "ಫಜಲ್, ನಿನ್ನ ಮಾತುಗಳನ್ನು ನಂಬಲು ಸಾಧ್ಯವಿಲ್ಲವಾಗಿದೆ. ತುಂಬಾ ಹದ್ದು ಬಸ್ತಿನಲ್ಲಿಯುವ ನನ್ನ ಪ್ರೀತಿಯ ಪುತ್ರ ಸಲೀಮನ ಮೇಲೆ ಯಾರು ಈ ಅಪವಾದ ಹೊರಿಸಿರು

ಪಿ. ಬಿ. ರಾಮಮೂರ್ತಿ.



ವರು? ಹುಡುಗನ ಸ್ವಭಾವ ನಾನರಿಯೆನೇ? ಆದರೂ ನಿನ್ನ ಮಾತನ್ನು ಅಲಕ್ಷ್ಯ ಮಾಡಲಾರೆ. ಸತ್ಯಾಸತ್ಯಗಳನ್ನು ನಾನು ಪರೀಕ್ಷಿಸುವೆನು. ನಮ್ಮ ಕ್ಷೇಮವನ್ನು ಕೋರುವ ನೀನು ಹುಡುಗನಿಗೆ ಉಚಿತರೀತಿಯಲ್ಲಿ ಬುದ್ಧಿ ಹೇಳುತ್ತಿರು" ಎಂದು ಹೇಳಿದ.

ಮರುದಿನ ರಾತ್ರಿ ದರ್ಬಾರಿನಲ್ಲಿ ಭಾರಿ ನೃತ್ಯ ಪ್ರದರ್ಶನ. ಆ ಪ್ರದರ್ಶನಕ್ಕೆ ಅಕ್ಬರ್ ಚಕ್ರವರ್ತಿ ಸ್ವತಃ ಏರ್ಪಾಟುಗಳನ್ನು ಮಾಡುತ್ತಿದ್ದ. ತನ್ನ ಸಿಂಹಾಸನಕ್ಕೆ ಎದುರಾಗಿ ಮಗನು ಕುಳಿತುಕೊಳ್ಳಲು ಮತ್ತೊಂದು ಸಿಂಹಾಸನವನ್ನು ಇಡಿಸಿದ. ಕುಮಾರನ ಸಿಂಹಾಸನದ ಮೇಲೆ ಒಂದು ನಿಲುವು ಗನ್ನಡಿಯನ್ನು ಜೋಡಿಸಿದ. ನರ್ತಕಿ ಮಾಡುವ ಎಲ್ಲಾ ಚೇಷ್ಟೆಗಳು ಚಕ್ರವರ್ತಿಗೆ ಆ ಕನ್ನಡಿಯಲ್ಲಿ ಚೆನ್ನಾಗಿ ಕಾಣಿಸುವುದು. ಈ ಗುಟ್ಟು ತನಗೊಬ್ಬನಿಗೆ ಮಾತ್ರ ತಿಳಿದಿದೆ.

ಪ್ರದರ್ಶನ ಪ್ರಾರಂಭವಾಯಿತು. ಅನಾರ್ಕಲಿ ಬಂದು ಸಭೆಗೆ ನಮಸ್ಕಾರ ಮಾಡಿದಳು. ನಮಸ್ಕರಿಸುತ್ತಿರುವಾಗಲೇ ಆಕೆ ಈ ನೂತನ ಏರ್ಪಾಟುಗಳನ್ನೆಲ್ಲಾ ನೋಡಿ, ವಿಷಯ ಗ್ರಹಿಸಿಕೊಂಡಳು. ಬಾದಷಹನಿಗೆ ಎದುರಾಗಿ ನೃತ್ಯ ಮಾಡಬೇಕೇ ಹೊರತು, ಬೆನ್ನು ತೋರುವುದು ಮರ್ಯಾದೆಗೆ ದೂರ. ಈ ಸಂಪ್ರದಾಯ ತಿಳಿದ ಅನಾರ್ಕಲಿ ತುಂಬಾ ಚಾಕಚಕ್ಯತೆಯಿಂದ ನಡೆದುಕೊಳ್ಳುತ್ತಿದ್ದಳು. ಅನಾರ್ಕಲಿ ನೃತ್ಯ ಮಾಡುತ್ತಿದ್ದರೆ ಪ್ರತಿಯೊಬ್ಬ ಸಭಿಕನೂ ಮಾರುಹೋದನು. ಚಕ್ರವರ್ತಿ ತನ್ಮಯನಾದ. ಆಕೆ ಅಷ್ಟುಹೊತ್ತೂ ಚಕ್ರವರ್ತಿಕಡೆಗೆ ತಿರುಗಿ ನೃತ್ಯ ಮಾಡುತ್ತಿರುವಳೇ ಹೊರತು, ತನ್ನ ಪಂಚಪ್ರಾಣವಾದ ಸಲೀಮನಕಡೆ ಒಂದು ಸಾರಿಯಾದರೂ ನೋಡಲಿಲ್ಲ.

ಪ್ರದರ್ಶನ ಮುಗಿಯುತ್ತಾ ಬಂದಿತು. ಕಟ್ಟಕಡೆಯಲ್ಲಿ ಗಿರಗಿರನೆ ಸುತ್ತುವ ನೃತ್ಯವನ್ನು ಅತ್ಯದ್ಭುತವಾಗಿ ಮಾಡುತ್ತಿರುವಳು. ಹಾಗೆ ತಿರುಗುವಾಗ ಸಲೀಮನಿಗೆ ಮಿಂಚಿನಂತೆ ಒಂದು ಕಿರುನಗೆ ಬೀರಿದಳು. ಆ ಕಿರುನಗೆಯನ್ನು ಸಲೀಮನೊಬ್ಬನು ಮಾತ್ರ ಸ್ವೀಕರಿಸಿದ. ಇದನ್ನು ಅಕ್ಬರನೊಬ್ಬನು ಮಾತ್ರ ಕಂಡು ಹಿಡಿದ. ಬ್ರಹ್ಮನಿಗೂ ಈ ಸಂಜ್ಞೆ ತಿಳಿಯದು.



ಫಜಲ್ ಹೇಳಿದ ಮಾತು ಅಕ್ಷರಶಃ ನಿಜವಾಯಿತು. ಈಗೇನು ಗತ್ಯಂತರವಿದೆ ಎಂದು ಯೋಚಿಸಿದ ಚಕ್ರವರ್ತಿ. ಅಬುಲ್ ಫಜಲ್ ಸಂಗಡ ಸಲೀಮನಿಗೆ ಅನೇಕ ರೀತಿ ಹೇಳಿಸಿ ನೋಡಿದ. ಎಷ್ಟು ಹೇಳಿದರೂ " ಈ ವಿಷಯದಲ್ಲಿ ನನ್ನ ಮನಸ್ಸು ಬದಲಾಯಿಸದು. ಲಾವಣ್ಯವತಿಯೂ, ನಾಟ್ಯರಾಣಿಯೂ ಆದ ಅನಾರ್ಕಲಿಯನ್ನು ಹೊರತು ಮತ್ತೆ ಯಾರನ್ನೂ ಮದುವೆ ಯಾಗುವುದಿಲ್ಲ " ಎಂದು ಸಲೀಮ ಖಡಾಖಂಡಿತವಾಗಿ ಹೇಳಿಬಿಟ್ಟ. ಇನ್ನು ಬಲವಂತಪಡಿಸಿದರೆ ಕಾರ್ಯ ಕೆಡುವುದೆಂದು ಹೆದರಿ ಅಬುಲ್ ಫಜಲ್ ಸುಮ್ಮನಾದ.

ಅಕ್ಬರ್ ಚಕ್ರವರ್ತಿಗೆ ಈ ವಿಷಯದಲ್ಲಿ ಹಠವು ಹೆಚ್ಚಿ, ಈ ಸಾರಿ ಫಜಲ್‌ನನ್ನು ಅನಾರ್ಕಲಿಯ ಹತ್ತಿರ ರಾಯಭಾರಿಯಾಗಿ ಕಳುಹಿಸಿದ. ಆತನು ಹೋಗಿ " ಅಮ್ಮಾ, ಸಲೀಮನನ್ನು ನೀನು ವಿವಾಹವಾಗುವುದರಿಂದ ರಾಜ್ಯವೆಲ್ಲಾ ಅರಾಜಕವಾಗುತ್ತದೆ. ಮನವನ್ನು ಬದಲಾಯಿಸಿಕೊ. ಇಷ್ಟಬಂದ ಮತ್ತೊಬ್ಬ ತರುಣನನ್ನುವರಿಸು. ನೀನು ಸಲೀಮನನ್ನುವಿವಾಹವಾಗುವುದರಿಂದ ಎಷ್ಟು ಐಶ್ವರ್ಯ ಪಡೆಯಬಹುದೆಂದು ಆಶಿಸುತ್ತಿರುವೆಯೋ, ಅದೆಲ್ಲವನ್ನೂ ನಾನು ನಿನಗೆ ಜೊತೆಗೂಡಿಸಿ ಗೂಡುವೆನು " ಎಂದು ಆಕೆಗೆ ಪರಿಪರಿ ರೀತಿಯಿಂದ ಹೇಳಿದ.

ಅದಕ್ಕೆ ಅನಾರ್ಕಲಿ " ಎಲೈ, ಮಂತ್ರಿ! ಸಲೀಮನ ಐಶ್ವರ್ಯವನ್ನು ಆಶಿಸಿ ನಾನು ಆತನನ್ನು ಕೋರಲಿಲ್ಲ. ಎಂದೋ ಆತನು ನನ್ನ ಹೃದಯದಲ್ಲಿ ಸ್ಥಾನವನ್ನೇರ್ಪಡಿಸಿಕೊಂಡಿದ್ದಾನೆ. ಎಂದೋ ನಾನಾತನಿಗೆ ಅಂಕಿತವಾಗಿಬಿಟ್ಟಿದ್ದೇನೆ. ಆದುದರಿಂದ ನಾನು ಆತನಿಗಾಗಿ ಎಂಥಾ ತ್ಯಾಗವನ್ನಾದರೂ ಮಾಡಬಲ್ಲೆ. ಈ ವಿಷಯದಲ್ಲಿ ನನ್ನ ಮನಸ್ಸು ಬದಲಾಗುವುದಿಲ್ಲ " ಎಂದು ತನ್ನ ಖಚಿತ ನಿರ್ಧಾರವನ್ನು ಹೇಳಿಬಿಟ್ಟಳು.

ದಯಾಶೀಲನೆಂದು ಹೆಸರುಪಡೆದ ಅಕ್ಬರ್ ಚಕ್ರವರ್ತಿ ಈ ಸಂದರ್ಭದಲ್ಲಿ ಕಠಿನಹೃದಯನಾದ. ಆಕೆಯನ್ನೂ ಮಗನನ್ನೂ ಅಗಲಿಸಿದರೆ ಪರಿಸ್ಥಿತಿ ಸುಧಾರಿಸಬಹುದೆಂದು ಕೊಂಡು ಅನಾರ್ಕಲಿಯನ್ನು ತನ್ನೊಂದಿಗೆ ಲಾಹೋರಿಗೆ ಕರೆದುಕೊಂಡು ಹೋಗಿ ಅಲ್ಲಿ ಆಕೆಗೆ ಬಹು

ವಿಧದಲ್ಲಿ ಹೇಳಿ ನೋಡಿದ. ಆಕೆ ಮನಸ್ಸು ಬದಲಾಯಿಸಲಿಲ್ಲ.

ಅನಾರ್ಕಲಿ ನಿಂತಿರುವಳು. ಬಾದಷಹನ ಆಜ್ಞೆಯನ್ನು ಕೇಳಿ ಬೇಗಬೇಗ ಕೆಲಸಗಾರರು ಬಂದರು. ಆಕೆಯ ಸುತ್ತಲೂ ಇಟ್ಟಿಗೆಯಿಂದ ಗೋಡೆ ಎಬ್ಬಿಸಿ, ಆಕೆಯನ್ನು ಪಾದಗಳಿಂದ ಸಜೀವಸಮಾಧಿ ಮಾಡುತ್ತ ಬರುತ್ತಿರುವರು. ಆ ಗೋಪುರ ಮೊಣಕಾಲಿನವರೆವಿಗೂ ಬಂತು. "ಏನು? ಮನಸ್ಸು ಬದಲಾಯಿಸುವೆಯಾ?" ಎಂದು ಕೇಳಿದ ಚಕ್ರವರ್ತಿ. "ಉಹೂ" ಎಂದಳು ಅನಾರ್ಕಲಿ ಕಿರುನಗೆ ಸೂಸುತ್ತಾ. ಕಟ್ಟಡ ಸೊಂಟದವರೆವಿಗೂ ಬಂತು. ಮತ್ತೆ ಕೇಳಿದ ಅಕ್ಬರ್. ಮತ್ತೆ ಅದೇ ರೀತಿ ಸಮಾಧಾನವಿತ್ತಳು ಅನಾರ್ಕಲಿ. ಒಂದೊಂದೇ ಇಟ್ಟಿಗೆ ವರಸೆ ಪೂರ್ತಿಯಾದಂತೆಲ್ಲಾ 'ಈಗಲಾದರೂ ಮನವು ಬದಲಾಯಿಸಿತೇ' ಎಂದು ಅಕ್ಬರನು ಕೇಳುತ್ತಲೇ ಬಂದ. ಆಗಲೂ ಆಕೆ ಸಂತೋಷದಿಂದ "ಇಲ್ಲ, ಬದಲಾಯಿಸಿಲ್ಲ, ಬದಲಾಗುವುದಿಲ್ಲ" ಎಂದು ಉತ್ತರ ಹೇಳಿದಳು.

ಕೊರಳವರೆವಿಗೂ ಬಂದುಬಿಟ್ಟಿತು ಕಟ್ಟಡ. ಮತ್ತೊಂದು ಸಾರಿ "ಏನು! ಈಗಲಾದರೂ ಮನಸ್ಸನ್ನು ಬದಲಾಯಿಸಿಕೊಳ್ಳುವೆಯೋ, ಇಲ್ಲವೋ" ಎಂದು ಕೇಳಿದ ಅಕ್ಬರ್. ಮತ್ತೆ ಅದೇ ಉತ್ತರ ಹೇಳಿದಳು ಆಕೆ. ಕಟ್ಟಡ ಬಾಯಿಯವರೆವಿಗೂ ಬಂತು. ಕೊನೆಸಾರಿ ಕೇಳಿದ ಬಾದಷಹ. ಅದಕ್ಕೆ ಅನಾರ್ಕಲಿ "ಎಷ್ಟು ಜನ್ಮಗಳಿಗಾದರೂ ಸಲೀಮನೆ ನನ್ನ ನಾಥನು" ಎಂದಳು. ತಕ್ಷಣವೇ ಮತ್ತೆರಡು ಸಾಲು ಜೋಡಿಸಿ ಕೆಲಸಗಾರರು ಗೋಪುರವನ್ನು ಮುಚ್ಚಿಬಿಟ್ಟರು.

ಎಲ್ಲಾ ಆದನಂತರ, ಅನಾರ್ಕಲಿ ಸಜೀವ ಸಮಾಧಿಯಾದ ವಿಷಯ ಸಲೀಮನಿಗೆ ತಿಳಿದು ಬಂತು. ಪರಿತಾಪದಿಂದ ತುಂಬಿ ಹೋಯಿತು ಸಲೀಮನ ಹೃದಯ. ಈಗ ಆತನೇನು ತಾನೇ ಮಾಡಬಲ್ಲ? ತಕ್ಷಣವೇ ಅಬುಲ್ ಫಜಲನನ್ನು ಕೊಂದು ಹಾಕಿದ. ದಂಗೆ ಎಬ್ಬಿಸಿದ. ಸಿಂಹಾಸನ ಹತ್ತಿದ. ತನ್ನ ಪ್ರೇಮ ಮೂರ್ತಿಯಾದ ಅನಾರ್ಕಲಿಯ ಹೆಸರಿನಲ್ಲಿ ಒಂದು ಅಪೂರ್ವ ಸುಂದರ ಉದ್ಯಾನವನ್ನು ನಿರ್ಮಿಸಿ, ಅದರಲ್ಲಿ ಸಾಟಿಯಿಲ್ಲದ ಭವನವನ್ನೊಂದು ಕಟ್ಟಿಸಿದ. ಅದು ಈಗಲೂ ಇದೆ.






ಒಂದು ಸಾರಿ ದೇವತೆಗಳೆಲ್ಲಾ ಸಭೆ ಸೇರಿ ಭೂಲೋಕದಲ್ಲಿ ಮಾನವರು ಯಾವ ರೀತಿ ನಡೆದುಕೊಳ್ಳುತ್ತಿದ್ದಾರೆ, ಅವರ ಒಳಿತು ಕೆಡಕುಗಳನ್ನು ಅರಿತುಕೊಂಡು, ಉಚಿತ ರೀತಿಯಲ್ಲಿ ಸತ್ಕರಿಸುವ ಎಂದು ತೀರ್ಮಾನಿಸಿದರು. ಈ ಕಾರ್ಯ ನೆರವೇರಿಸಿಕೊಂಡು ಬರುವ ಸರದಿ ವರುಣದೇವನದಾಯಿತು.

ವರುಣದೇವನು ಶುಭ ದಿನವನ್ನು ನೋಡಿ ವಿಮಾನದಂಥ ಒಂದು ಮೇಘವನ್ನು ವಾಹನವನ್ನಾಗಿ ಮಾಡಿಕೊಂಡು ಒಬ್ಬ ವೃದ್ಧ ಬಿಕ್ಷುಕನ ರೂಪದಲ್ಲಿ ಭೂಲೋಕಕ್ಕೆ ಹೊರಟ.

ಹೋಗಿಹೋಗಿ ಅರ್ಧರಾತ್ರಿ ಸಮಯಕ್ಕೆ ಒಂದು ಸಣ್ಣ ಗ್ರಾಮವನ್ನು ಸೇರಿಕೊಂಡು, ಒಂದು ಮನೆ ಬಾಗಿಲು ತಟ್ಟಿದ. ಆ ಮನೆಯಾಕೆ ಎದ್ದು ಬಂದು ಬಾಗಿಲು ತೆಗೆದಳು. "ಅಯ್ಯೋ ತಾತ, ಇಂಥರಾತ್ರಿ ಚಳಿಯಲ್ಲಿ ಹೀಗೆ ತಡಕಾಡುತ್ತಿದ್ದೀಯಲ್ಲಾ. ಪಾಪ, ಒಳಗೆ ಬಂದು ಮಲಗಿಕೋ. ಬೆಳಗ್ಗೆ ಎದ್ದು ಹೋಗುವೆಯಂತೆ" ಎಂದು ಎಷ್ಟೋ ವಾತ್ಸಲ್ಯದಿಂದ ಆದರಿಸಿದಳು.

ತಾತ ಒಳಗೆ ಹೋದಕೂಡಲೇ ಮೂರ್ಛೆ ಹೋದ. ಬಾಯಿಂದ ಮಾತು ಬರಲೊಲ್ಲದು. ಇದನ್ನು ಕಂಡು ಆಕೆ "ಓಹೋ, ಈ ಮುದುಕ ದಾರಿ ತಪ್ಪಿ ಇತ್ತಕಡೆ ಬಂದಿದ್ದಾನೆ. ತಿಂಡಿ ತೀರ್ಥ ಮಾಡಿದಹಾಗೂ ಕಾಣುವುದಿಲ್ಲ. ಪಾಪ" ಎಂದು ಕನಿಕರಗೊಂಡಳು.

ನಿಜವಾಗಿ ಹೇಳಬೇಕೆಂದರೆ ಆ ಮನೆಯವರು ಹೇಳಿಕೊಳ್ಳುವಷ್ಟು ಭಾಗ್ಯವಂತರೇನಲ್ಲ. ಕಷ್ಟದಿಂದಲೇ ಕಾಲಯಾಪನ ಮಾಡುತ್ತಿದ್ದರು. ಮನೆಯ ಯಜಮಾನ ನೆರೆಯೂರಿಗೆ ಹೋಗಿದ್ದಾನೆ. ಯಾವ ನಿಮಿಷ ಗಂಡ ಬರುವನೋ ಎಂದು ಆಕೆ ದಿನಾ ಅಡಿಗೆ ಮಾಡಿ ಸಿದ್ಧವಾಗಿಡುತ್ತಿದ್ದಳು. ಈಗ ಆಕೆ ವೃದ್ಧನನ್ನು ಎಬ್ಬಿಸಿ, ತಕ್ಕ ಉಪಚಾರಗಳನ್ನು ಮಾಡಿ, ಆತನು ಚೇತರಿಸಿಕೊಂಡ ಕೂಡಲೇ ಆ ಅಡಿಗೆಯನ್ನು ಆತನಿಗೆ ಬಡಿಸಿದಳು.

ತಾತನ ಸ್ಥಿತಿ ಕಂಡು ಕಂಡು ಆಕೆಯ ಹೃದಯ ಬಿರಿಯಿತು. ಆತನ ಮೈಮೇಲೆ ಬಟ್ಟೆಯಿರುವುದೆಂಬ ಮಾತೇಹೊರತು ಎಲ್ಲಾ ಚಿಂದಿ ಚಿಂದಿ. "ಅಯ್ಯೋ, ನನ್ನಪ್ಪಾ,

ಎಂ. ಬಿ. ಜಾನಕಿ.




ಇದೇನು ಬಟ್ಟೆ—ಛಳಿಯ ವಿಷಯ ನೋಡಿಕೊಳ್ಳಲಿ ಆ ದೇವರು, ಮಾನವಾದರೂ ಕಾಪಾಡಿ ಕೊಳ್ಳಬೇಡವೇ" ಎಂದು ಲಗುಬಗನೆ ಕೊಠಡಿಯೊಳಕ್ಕೆ ಹೋಗಿ, ಮೂಟೆ ಬಿಚ್ಚಿ, ಗಂಡನಿಗೆ ಸೇರಿದ ಒಂದು ಪಂಚೆಯನ್ನು ಪರ್ರನೆ ಹರಿದು "ಇದೊಂದೇ ಇದೆ ತಾತ. ಉಟ್ಟುಕೊಳ್ಳುವೆಯೋ, ಹೊದೆದುಕೊಳ್ಳುವೆಯೋ; ಇದಕ್ಕಿಂತ ನಾನೇನುತಾನೇ ಮಾಡಬಲ್ಲೆ" ಎಂದು ಹೇಳುತ್ತಾ ಸುಸ್ತಾಗಿದ್ದ ಆ ಮುದುಕನಿಗೆ ಆ ಬಟ್ಟೆ ಸುತ್ತಿದಳು.

ಇಷ್ಟೇ ಅಲ್ಲದೆ ಗಂಡನ ಹರಿದು ಹೋದ ಒಂದು ಬನೀನು ಇತ್ತು. ಅದನ್ನು ಹೊಲಿದು ಸರಿಮಾಡಿ ಆ ದಿಕ್ಕಿಲ್ಲದಾತನಿಗೆ ಕೊಡೋಣವೆಂದು ಕುಳಿತಳು. ಆ ಹೊಲಿಗೆ ಕೆಲಸ ಪೂರ್ತಿಯಾಗುವ ವೇಳೆಗೆ ಬೆಳಗಾಯಿತು. ನಿದ್ದೆಯಿಲ್ಲದಿದ್ದರೆಬೇಡ ಕೆಲಸ ಪೂರ್ತಿಆಯಿತಲ್ಲಾ ಎಂದು ಆಕೆ ತೃಪ್ತಳಾದಳು.

ಆ ಅಂಗಿಯನ್ನು ತಾತನಿಗೆ ಕೊಟ್ಟು, "ತಾತ, ಇದನ್ನು ಹಾಕಿಕೊ. ಬೆಳಗಾಯಿತು. ಬರೀ ಹೊಟ್ಟೆಯಿಂದ ಎಲ್ಲಿಗೆ ಹೋಗುವೆ? ಒಂದು ನಿಮಿಷ ಇರು. ಸ್ವಲ್ಪ ಬಿಸಿ ಗಂಜಿ ಮಾಡಿ ಕೊಡ್ತೇನೆ. ಅದನ್ನಿಷ್ಟು ಹೊಟ್ಟೆಗೆ ಸುರಿಸಿಕೊಂಡು ನಿನ್ನ ದಾರಿ ನೀನು ಹೋಗಬಹುದು" ಎಂದಳು. ಎಷ್ಟೋ ಅಭಿಮಾನದಿಂದ ಗಂಜಿ ಮಾಡಿದಳು. ಕುಡಿಸಿದಳು. ತರುವಾಯ ಒಂದು ಚೂರು ಚುಟ್ಟಾ ಸಹ ಕೊಟ್ಟಳು. ತಾತ ತುಂಬಾ ಸಂತಸಗೊಂಡ. ಅದನ್ನು ಆತನು ಬಾಯಿಯಲ್ಲಿಟ್ಟು ಕೊಂಡ ಬೆಂಕಿ ಹಚ್ಚಿ ಮೆಲ್ಲನೆ ಹೊಗೆ ಬಿಡುತ್ತಾ "ಅಮ್ಮಾ ನಿನ್ನ ಉಪಚಾರದಿಂದ ನನಗೆ ಪ್ರಾಣಬಂತು. ಮತ್ತೆ ಬರ್ತೇನೆ. ಚಿನ್ನದಂತಹ ತಾಯಿ ನೀನು. ನಿನಗೊಂದು ಮಾತು ಹೇಳಿ ಹೋಗುವೆನು. ನಾನು ಹೊರಟು ಹೋದ ಮೇಲೆ ಪ್ರಥಮ ನೀನು ಯಾವ ಕೆಲಸವನ್ನು ಪ್ರಾರಂಭಿಸುವೆಯೋ, ಅದೇ ಕೆಲಸವನ್ನು ಸೂರ್ಯಾಸ್ತಮದವರೆವಿಗೂ ಮಾಡುತ್ತಾ ಇರುವೆ" ಎಂದು ಹೇಳಿ ಹೊಸ್ತಿಲು ದಾಟಿ ನಾಲ್ಕು ಹೆಜ್ಜೆ ಮುಂದೆ ಹಾಕಿ ಅದೃಶ್ಯನಾದ.

ತಾತನನ್ನು ಕಳುಹಿಸಿ, ಮನೆಯೊಳಕ್ಕೆ ಬರಲು ಆಕೆಗೆ ಹಿಂದಿನ ರಾತ್ರಿ ತಾನು ಗಂಡನ ಪಂಚೆ ಹರಿದ ವಿಷಯ ಜ್ಞಾಪಕಕ್ಕೆ ಬಂತು. ಉಳಿದಿದ್ದ ತುಂಡು ಪಂಚೆ ಎಷ್ಟು ಉದ್ದ



ವಿದೆಯೋ, ಗಂಡನಿಗೆ ಸುತ್ತಿಕೊಳ್ಳಲಾದರೂ ಸಾಧ್ಯವೋ ಇಲ್ಲವೋ ಎಂದು ಮೊಳಹಾಕಲು ಸಿದ್ಧಳಾದಳು.

ಅದೇನು ವಿಚಿತ್ರವೋ ಆಕೆ ಆ ರೀತಿ ಮೊಳ ಹಾಕುತ್ತಿದ್ದರೆ ಆ ಪಂಚೆ ತುಂಡು ಅಕ್ಷಯವಾಗುತ್ತಾ ಬರುತ್ತಿದೆ. ಅಡಿಗೆ ಮಾಡಲು ಹೋಗೋಣವೆಂದರೆ ಪಂಚೆ ಎಷ್ಟಕ್ಕೂ ಮುಗಿಯುವುದಿಲ್ಲ! ಹಾಗೇ ಆಕೆ ಅಳೆದ ಒಟ್ಟೆ ಮನೆಯೆಲ್ಲಾ ತುಂಬಿ ಹೋಗಿ, ಸೂರ್ಯಾಸ್ತಮಯ ಸಮಯಕ್ಕೆ ನಿಂತು ಹೋಯಿತು. ಗಂಡ ಊರಿನಿಂದ ಬಂದ ಕೂಡಲೇ ಆಕೆ ಈ ವಿಚಿತ್ರವನ್ನೆಲ್ಲಾ ಹೇಳಿದಳು. ಅವರು ಆ ಬಟ್ಟೆಯನ್ನು ಮಾರಿ ಯಥೇಚ್ಛವಾಗಿ ಹಣಗಳಿಸಿ, ಸುಖವಾಗಿ ಕಾಲ ಕಳೆಯುತ್ತಿದ್ದರು. ತುಂಬಾ ಶೀಘ್ರವಾಗಿ ಊರಲೆಲ್ಲಾ ಈ ಸುದ್ದಿ ಹರಡಿಬಿಟ್ಟಿತು

ನೆರೆಮನೆ ನಾಗಮ್ಮ ಸುಮ್ಮನಿರಲಾರದೆ ಆಕೆಯ ಮೇಲೆ ಮೇಲೆ ಬಿದ್ದು ವಿವರಗಳನ್ನೆಲ್ಲಾ ಕೇಳಿ ತಿಳಿದುಕೊಂಡಳು. ಅಂದಿನಿಂದ "ನಮ್ಮ ಮನೆಗೂ ಯಾರಾದರೂ ಅತಿಥಿಗಳು ಬಂದರೆ ಎಷ್ಟು ಚೆನ್ನಾಗಿರುತ್ತದೆ" ಎಂದು ಆತುರದಿಂದ ಎದುರು ನೋಡುತ್ತಿದ್ದಳು. ಅಂದುಕೊಂಡಂತೆ ಕೆಲದಿನಕ್ಕೆ ನಾಗಮ್ಮನ ಮನೆಗೆ ಮಧ್ಯರಾತ್ರಿಯಲ್ಲಿ ಒಬ್ಬ ಮುದುಕ ಬಂದು ಬಾಗಿಲು ತಟ್ಟಿದ.

ಸಿದ್ಧವಾಗಿಯೇ ಇದ್ದ ನಾಗಮ್ಮ ತಟಾರನೆ ಹೋಗಿ ಬಾಗಿಲು ತೆಗೆದಳು. ಸೋಗಿನ ಆದರವನ್ನು ಸೂಸುತ್ತಾ "ಬನ್ನೀ ತಾತ, ಬನ್ನೀ" ಎಂದು ಆತನನ್ನು ಒಳಗೆ ಕರೆದುಕೊಂಡು ಹೋದಳು ಆತನು ಕೇಳದಿದ್ದರೂ ಮೃಷ್ಟಾನ್ನ ಭೋಜನವನ್ನು ಬಡಿಸಿದಳು. ನೆರೆಮನೆಯಾಕೆ ಮಾಡಿದಂತೆಯೇ ಮಾಡಬೇಕೆಂಬ ಆತುರದಿಂದ "ಅಯ್ಯೋ ಪಾಪ" ಎಂದು ವೃದ್ಧನನ್ನು ಕಂಡು ಮರುಕಗೊಂಡು, ಗಂಡನ ಪಂಚೆಯಲ್ಲಿ ಅರ್ಧ ಹರಿದುಕೊಟ್ಟು "ಇದನ್ನು ಹೊದೆದುಕೊಂಡು ಮಲಗಿಕೊಳ್ಳೀ ತಾತ. ಬೆಳಗ್ಗೆ ಹೋಗುವಿರಂತೆ" ಎಂದಳು.

ಬೆಳಗಾಯಿತು. "ಅಮ್ಮಾ ನಾನು ಹೋಗುತ್ತೇನೆ" ಎಂದ ಆ ತಾತ. "ಅದೆಂತಹ ಮಾತು. ಸ್ವಲ್ಪ ಹೊಟ್ಟೆಗೇನಾದರೂ ಹಾಕಿಕೊಂಡು ಹೋಗುವಂತೆ ಯಿರು ತಾತ. ಶರೀರದಲ್ಲಿ ಸುಸ್ತುಯಿರುವುದಿಲ್ಲ" ಎಂದಳು

ನಾಗಮ್ಮ, ತುಂಬಾ ಮಮತೆ ಇರುವಂತೆ. ನೆರೆಮನೆಯಾಕೆ ಮಾಡಿದಂತೆಯೇ ತಾನೂ ಸಹ ಗಂಜಿ ಮಾಡಿಕೊಟ್ಟಳು.

ಮೊದಲ ಮನೆಯಾಕೆಗೆ ಹೇಳಿದಂತೆಯೇ ತಾತ ಈಕೆಯೊಂದಿಗೂ "ಅಮ್ಮಾ ನಿನ್ನ ಕೈಗುಣದಿಂದ ನನಗೆ ಪ್ರಾಣ ಬಂತು. ಮತ್ತೆ ಹೋಗಿಬರುತ್ತೇನೆ. ಚಿನ್ನದಂತಹ ತಾಯಿ ನೀನು. ನಿನಗೊಂದು ಮಾತು ಹೇಳಿಹೋಗುವೆನು. ನಾನು ಹೊರಟು ಹೋದಮೇಲೆ ಪ್ರಥಮ ನೀನು ಯಾವ ಕೆಲಸವನ್ನು ಪ್ರಾರಂಭಿಸುವೆಯೋ, ಅದೇ ಕೆಲಸವನ್ನು ಸೂರ್ಯಾಸ್ತಮಾನದವರೆವಿಗೂ ಮಾಡುತ್ತಾ ಇರುತ್ತಿ" ಎಂದು ಹೇಳಿ ಹೊರಟು ಅದೃಶನಾದ.

ನಾಗಮ್ಮ ಬೇಗ ಬೇಗ ಕೊಠಡಿಯೊಳಕ್ಕೆ ಹೋಗಿ, ತಾತನಿಗೆ ತಾನು ಹರಿದುಕೊಟ್ಟ ಗಂಡನ ಪಂಚೆಯನ್ನು ಅಳೆಯೋಣವೆಂದುಕೊಂಡಳು. ಆದರೆ ಅಷ್ಟರಲ್ಲಿ ದನಗಳಿಗೆ ಬಾಯಾರಿಕೆಯಾಗಿ, ಅವು ಒಂದೇ ಸವನೆ ಅರಚಲಾರಂಭಿಸಿದವು. 'ತೊಟ್ಟಿಯಲ್ಲಿ ನೀರು ತುಂಬಿ ಅವುಗಳ ಪೀಡೆ ಬಿಡಿಸಿಕೊಳ್ಳೋಣ. ಇನ್ನು ಇಡೀದಿನ ನಿಶ್ಚಿಂತೆಯಾಗಿ ಕುಳಿತುಕೊಂಡು ಅಳೆಯುತ್ತಾ ಇರಬಹುದು' ಎಂದು ಅಂದು ಕೊಂಡಳು ನಾಗಮ್ಮ.

ಹಾಗೆಂತ ಅಂದುಕೊಂಡು ಬಾವಿ ಹತ್ತಿರಕ್ಕೆ ಹೋಗಿ ನೀರು ಸೇದಲು ಪ್ರಾರಂಭಿಸಿದಳು. ತೊಟ್ಟಿಯನ್ನು ತುಂಬಿಸಿ ಹೊರಟು ಹೋಗೋಣವೆಂದಿದ್ದರೆ, ಕೈಯಿಂದ ಹಗ್ಗ ಬಿಟ್ಟರಷ್ಟೇ! ದೇವರೇ ಎಂದು ಸಾಯಂಕಾಲದ ವರೆವಿಗೂ ಆಕೆ ನೀರು ಸೇದುತ್ತಲೇ ಇದ್ದಳು. ಆ ನೀರಿನಿಂದ ಗಂಜಿನೀರಿನ ತೊಟ್ಟಿ ಮಾತ್ರವಲ್ಲದೆ ಮನೆಮಠವೆಲ್ಲಾ ನೀರಿನಿಂದ ತುಂಬಿ ಹೋಯಿತು. ಅಷ್ಟು ಮಾತ್ರವೇ ಅಲ್ಲ. ಆ ಬೀದಿಯೆಲ್ಲಾ ಕೆಸರಾಯಿತು. ಎಲ್ಲರೂ ಆಕೆಯೊಂದಿಗೆ ಜಗಳಕ್ಕೆ ಬಂದು ನಾನಾ ಮಾತು ಆಡಿದರು. ಏನಾದರೇನು! ಕೈಗಳು ಕಿತ್ತು ಹೋಗುವಂತೆ ನೀರು ಸೇದುವುದು, ವಿನಾ ಕಾರಣ ಊರಿನವರು ನಿಂದೆಗಳನ್ನು ತಿನ್ನುವುದೂ ನಾಗಮ್ಮನಿಗೆ ಪ್ರಾಪ್ತವಾಯಿತು.

ದೇವರ ದೃಷ್ಟಿಯಲ್ಲಿ ಎಲ್ಲರೂ ಒಂದೇ. ಎಲ್ಲರನ್ನೂ ಸುಮಭಾವದಿಂದಲೇ ಸತ್ಕರಿಸುವನು. ಆದರೆ ಫಲಾಪಲಗಳು ಮಾತ್ರ ಅವರವರ ಗುಣಾವಗುಣಗಳನ್ನು ಅನುಸರಿಸಿದೆ.





# ತಾತನಮಾತು

ಪೂರ್ವಕಾಲದಲ್ಲಿ ಚೀನಾದೇಶದಲ್ಲಿ ಚಾಂಗ್ ಎಂಬ ಹುಡುಗನಿದ್ದ. ಅವನು ವಾಸ ಮಾಡುತ್ತಿದ್ದ ಪ್ರದೇಶ ಗುಡ್ಡಗಾಡು. ಆ ಬೆಟ್ಟಗಳಲ್ಲಿ ಯಾವುದೋ ಒಂದರಲ್ಲಿ ಏನೋ ವಿಚಿತ್ರವಿದೆಯೆಂದು ಜನ ಹೇಳಿಕೊಳ್ಳುತ್ತಿದ್ದರು. ಅದನ್ನು ಕೇಳಿ ಚಾಂಗ್ ಪ್ರತಿದಿನಾ ಆ ಬೆಟ್ಟಗಳ ಮೇಲೆಲ್ಲಾ ಓಡಾಡುವನು.

ಈ ರೀತಿ ಓಡಾಡುತ್ತಿರಲು ಒಂದು ದಿನ ಒಂದು ಬೆಟ್ಟದಮೇಲೆ ಗುಹೆಯೊಂದು ಕಾಣಿಸಿತು. ಅದಕ್ಕೆ ಅಗಾಧವಾದ ಕಲ್ಲಿನಬಾಗಿಲು ಮುಚ್ಚಿತ್ತು. ಅದನ್ನು ತೆರೆಯುವ ವಿಧಾನವೇನಪ್ಪಾ ಎಂದು ಆಲೋಚಿಸುತ್ತಿರುವಾಗ, ಯಾರೋ ಮನುಷ್ಯರು ಸುಳಿದಾಡುವ ಸದ್ದಾಯಿತು. ತಟಕ್ಕನೆ ಅಲ್ಲೇ ಅವಿತಿಟ್ಟುಕೊಂಡು ಚಾಂಗ್ ಆ ಪ್ರದೇಶವನ್ನು ಸೂಕ್ಷ್ಮವಾಗಿ ವೀಕ್ಷಿಸುತ್ತಿದ್ದನು.

ಅಷ್ಟರಲ್ಲಿ ವೃದ್ಧನೊಬ್ಬನು ಅಲ್ಲಿಗೆ ಬಂದು "ಕೈಕೂ ಬಂದಿದಾನೆ ಬಾಗಿಲು ತೆಗೆ" ಎಂದು ಮೂರು ಸಾರಿ ಅಂದ. ಬಾಗಿಲು ತೆಗೆಯಿತು. ಒಳಗೆ ಪ್ರವೇಶಿಸಿದ. ಸ್ವಲ್ಪ ಹೊತ್ತಾದ ಮೇಲೆ ತಾತ ಹೊರಗೆ ಬಂದು "ಕೈಕೂ ಹೋಗುತ್ತಿದಾನೆ. ಬಾಗಿಲು ಹಾಕಿಕೊ" ಎಂದ. ಕೂಡಲೇ ಬಾಗಿಲು ಮುಚ್ಚಿಕೊಂಡಿತು. ತಾತ ತನ್ನದಾರಿ ತಾನು ಹಿಡಿದ.

ತಾತ ಕಣ್ಮರೆಯಾದಕೂಡಲೇ, ಆತುರದಿಂದ ವೀಕ್ಷಿಸುತ್ತಿದ್ದ ಚಾಂಗ್ ಗುಹೆಯ ಹತ್ತಿರ ಬಂದು "ಚಾಂಗ್ ಬಂದಿದ್ದಾನೆ, ಬಾಗಿಲು ತೆಗೆ" ಎಂದು ತನ್ನ ಹೆಸರು ಹೇಳಿ ಕೂಗಿದ. ಬಾಗಿಲು ತೆಗೆಯಲಿಲ್ಲ. ಆಗ ಅವನಿಗೆ ತಾತ ಮೂರು ಸಾರಿ ಹೇಳಿದ್ದು ಜ್ಞಾಪಕಕ್ಕೆ ಬಂತು. ಮತ್ತೆರಡು ಸಾರಿ ಮಂತ್ರ ಹೇಳಿದ. ಡಢಾರನೆ ಬಾಗಿಲು ತೆರೆಯಿತು.

ಉತ್ಸಾಹದಿಂದ ಚಾಂಗ್ ಒಳಗೆ ಪ್ರವೇಶಿಸಿದ. ಅದೊಂದು ಅಗಾಧವಾದ ಗುಹೆ. ಗೋಳಾಕಾರವಾಗಿ ಇತ್ತು. ಸುತ್ತಲೂ ಗೋಡೆ. ಎತ್ತ ನೋಡಿದರೂ ನೀರವತೆ.

ರಂಗನಾಯಕಿ, ಮಲ್ಲೇಶ್ವರ.



ಅಲ್ಲಿ ಆರು ಗುಡ್ಡಗಳು ಗುಹೆಗೆ ಸುತ್ತಲಿರುವ ಪ್ರಾಕಾರಕ್ಕೆ ಅಂಟಿಕೊಂಡಿದ್ದವು. ಮತ್ತೊಂದು ಗುಡ್ಡ ಆ ಪ್ರದೇಶದ ಮಧ್ಯದಲ್ಲಿತ್ತು. ಚಾಂಗ್ ಅಲ್ಲಿಗೆ ಬರಲು ಆತನಿಗೆ ಒಂದು ಹಾಲ್ಗಲ್ಲಿನ ಶಿಲೆ ಕಾಣಿಸಿತು. ಅದರ ಮೇಲೆ ಕಾಲಿಡಲು ಸರ್ರನೆ ಜಾರಿಬಿದ್ದ. ಅದರೊಂದು ವಿಚಿತ್ರ. ಕಾಲು ಆ ಶಿಲೆಗೆ ಸೋಕಿತೋ ಇಲ್ಲವೋ ಆ ಗುಡ್ಡ ಗಿರಗಿರನೆ ತಿರುಗಲಾರಂಭಿಸಿತು.

ನೋಡುತ್ತಿರುವಂತೆಯೇ ಆ ಗುಡ್ಡ ಪಾತಾಳಕ್ಕೆ ಇಳಿದು, ಆ ಸ್ಥಳದಲ್ಲೊಂದು ದೊಡ್ಡ ರಂಧ್ರವೇರ್ಪಟ್ಟಿತು. ಚಾಂಗ್‌ಗೆ ಈಗ ಕುತೂಹಲ ಇನ್ನಷ್ಟು ಹೆಚ್ಚಿತು. ಆ ರಂಧ್ರದೊಳಕ್ಕೆ ಇಳಿಯಲು ಅನುಕೂಲವಾಗಿ ಮೆಟ್ಟಿಲು ಅಳವಡಿಸಲಾಗಿತ್ತು. ಗಬಗಬನೆ ಆ ಮೆಟ್ಟಿಲು ಇಳಿದ ಕೂಡಲೇ ಮತ್ತೊಂದು ದೊಡ್ಡ ದ್ವಾರ ಕಾಣಿಸಿತು. ಅದಕ್ಕೆ ಬ್ರಹ್ಮಾಂಡವಾದ ಮರದ ಬಾಗಿಲಿತ್ತು.

ಆ ದ್ವಾರದ ಹತ್ತಿರ ಸಹ ಹಿಂದಿನಂತೆ ಮೂರು ಬಾರಿ ಮಂತ್ರ ಪಠಿಸಿದ. ಕೂಡಲೇ ಮರದ ಬಾಗಿಲು ತೆರೆದುಕೊಂಡು ದಾರಿ ಕೊಟ್ಟಿತು. ಬಾಗಿಲು ತೆರೆದ ಕೂಡಲೇ ದೇದೀಪ್ಯಮಾನವಾದ ಬೆಳಕೊಂದು ಕಾಣಿಸಿತು. ಆ ಬೆಳಕು ಆಶ್ಚರ್ಯಕರವಾದ ಕಿರಣಗಳಿಂದ ಕೂಡಿತ್ತು. ಹಿಂದೊಂದು ಕಿರಣವೂ ಒಂದೊಂದು ಬಣ್ಣ. ಕಿರಣಗಳು, ನೆಲದಮೇಲೆ ಬಿದ್ದಾಗ ಆ ಬಣ್ಣ ಬದಲಾಯಿಸುತ್ತಾ ನೋಡಲು ಸೊಗಸಾಗಿತ್ತು.

ಮನ ದಣಿಯುವಷ್ಟು ಹೊತ್ತು ಈ ಕಿರಣಗಳನ್ನೂ ಬಣ್ಣಗಳನ್ನೂ ನೋಡಿ, ಚಾಂಗ್ ನಾಲ್ಕು ಹೆಜ್ಜೆ ಮುಂದಿಡಲು, ಮತ್ತೊಂದು ದ್ವಾರ ಕಾಣಿಸಿತು. ಅದಕ್ಕೂ ಹಿಂದು ಬಾಗಿಲಿತ್ತು. ಆದರೆ ಇದು ಲತೆಗಳಿಂದ ಹಬ್ಬಿದ ಒಂದು ವಿಚಿತ್ರವಾದ ಬಾಗಿಲು. ಚಾಂಗ್ ಮತ್ತೆ ಪಠಿಸಿದ ಮಂತ್ರ. ಬಾಗಿಲು ತೆಗೆದುಕೊಂಡಿತು. ಒಳಗೆ ಪ್ರವೇಶಿಸಲು ಒಂದು ರಮಣೀಯವಾದ ಉದ್ಯಾನ ಕಾಣಿಸಿತು. ಆ ಉದ್ಯಾನ ಎಂದೂ ಕಾಣದ ವಿಚಿತ್ರ ಪಕ್ಷಿಜಾತಿಯಿಂದ ಜಂತುಜಾಲಗಳಿಂದ ವೃಕ್ಷ ಸಮೂಹದಿಂದ, ಪುಷ್ಪಗಳಿಂದ ತುಂಬಿದೆ. ಇವುಗಳನ್ನು ನೋಡಿದಷ್ಟೂ ಇನ್ನೂ ನೋಡಬೇಕೆನ್ನಿಸುತಿತ್ತು. ಹಿಂತಿರುಗುವ ಮನಸ್ಸಾಗ



ಲಿಲ್ಲ ಚಾಂಗ್‌ಗೆ. ಆದರೆ ಹಸಿವಿನ ಬಾಧೆ ಒಂದು ಕಡೆ. ಯಾರಾದರೂ ಬಂದು ಹಿಡಿದು ಹಾಕುವರೇನೋ ಎಂಬ ಭಯ ಮತ್ತೊಂದು ಕಡೆ. ಆದುದರಿಂದ ಜಾಗ್ರತೆಯಾಗಿ ಮಂತ್ರಗಳನ್ನು ಪಠಿಸುತ್ತಾ ಹಿಂತಿರುಗಿ ಮೂರು ದ್ವಾರಗಳನ್ನೂ ಮುಚ್ಚಿಸಿ, ಹೊರಬಿದ್ದು, ಚಾಂಗ್ ಮನೆದಾರಿ ಹಿಡಿದ.

* * *

ಮನೆ ಸೇರಿಕೊಂಡಮೇಲೆ ಚಾಂಗ್, ತಾನು ನೋಡಿ ಬಂದ ತಮಾಷೆಗಳೆಲ್ಲವನ್ನೂ ಮಣಿ ಪೋಣಿಸಿದಂತೆ ತನ್ನ ಅಜ್ಜಿಗೆ ಹೇಳಿದ. ಅಜ್ಜಿಯೆಂದರೆ ಚಾಂಗ್‌ಗೆ ತುಂಬಾ ಪ್ರೀತಿ. ಆಕೆಯೇ ಅವನಿಗೆ ಸರ್ವಸ್ವ. ಆದ್ದರಿಂದ ಆಕೆಯೊಂದಿಗೆ ಈ ವಿಚಿತ್ರವನ್ನು ಹೇಳದೆ ಹೇಗೆ ತಾನೇ ಇರುತ್ತಾನೆ! ಅದೆಲ್ಲವನ್ನೂ ಕೇಳಿ ಆ ಮುದುಕಿ "ನನಗೆ ತೋರಿಸೋಲ್ಲವೇನೋ ಆ ವಿಚಿತ್ರಗಳನ್ನು" ಎಂದು ಅಂಗಲಾಚಿ ಕೇಳಿದಳು. ಎಂದೂ ಏನೂ ಕೇಳದ ಆಕೆ ಈ ರೀತಿ ಕೋರಿದ್ದೇ ಹೆಚ್ಚು. ಇಲ್ಲ ಎಂದು ಹೇಳುವನೇ ಮಮತೆಯ ಮೊಮ್ಮಗ?

ಮಾರನೆಯ ದಿನ ಚಾಂಗ್ ಮುದುಕಿಯನ್ನೂ ಸಂಗಡ ಕರೆದುಕೊಂಡು ಹೊರಟ. "ಅಜ್ಜೀ, ಕತ್ತಲಿನ ಗುಹೆಗಳೂ, ಗುಡ್ಡಗಳೂ ಕಾಣಿಸುತ್ತವೆ. ಹೆದರಿಕೋ ಬೇಡ" ಎಂದು ಆಕೆಗೆ ಮೊದಲೇ ಎಚ್ಚರಿಕೆ ಕೊಟ್ಟ. ಮಂತ್ರವನ್ನು ಪಠಿಸಿ, ಒಂದೊಂದೇ ದ್ವಾರವನ್ನು ತೆಗೆಸಿದ. ಗುಡ್ಡ, ಗುಹೆಗಳನ್ನು ಕಂಡು ಮುದುಕಿ ಭಯಗೊಂಡಳು. ಆದರೆ ಮೊದಲೇ ಮೊಮ್ಮಗ ಎಚ್ಚರಿಕೆ ಕೊಟ್ಟಿದ್ದರಿಂದ ಎದೆಗಟ್ಟಿಮಾಡಿಕೊಂಡಳು. ಬಣ್ಣದ ಕಿರಣಗಳನ್ನು ಕಂಡು ಆಕೆಯ ಕಣ್ಣು ಕೋರೈಸಿ, ತನ್ಮಯಳಾದಳು. ತರುವಾಯ ತೋಟದಲ್ಲಿ ಪ್ರವೇಶಿಸಿ, ಅಲ್ಲಿನ ಸೃಷ್ಟಿ ವೈಚಿತ್ರವನ್ನು ನೋಡಲು, ಆಕೆಯ ಆಶ್ಚರ್ಯಕ್ಕೆ ಮಿತಿಯಿಲ್ಲ!

ಎಲ್ಲಾ ನೋಡಿದ ತರುವಾಯ ಚಾಂಗ್ ಮನೆಗೆ ಹಿಂತಿರುಗಲು ಮನಸ್ಸು ಮಾಡಿದ. ನಾಲ್ಕು ಹೆಜ್ಜೆ ಇಟ್ಟನೋ ಇಲ್ಲವೋ ಹಿಂದಕ್ಕೆ ತಿರುಗಿ ನೋಡಿದರೆ ಮುದುಕವ್ವ ಕಾಣಿಸಲಿಲ್ಲ. ಗುಹೆ ಎಲ್ಲಾ ಹುಡುಕಾಡಿದ ಚಾಂಗ್. 'ಅಜ್ಜಿ' ಎಂದು ಕೂಗಿದ. ಏನು ಮಾಡಿದರೂ ಪತ್ತೆ ಸಿಗಲಿಲ್ಲ. ಕಂಗಾಲಾಗಿ ಮನೆಗೆ ಹೋದ. ಅಲ್ಲಿಯೂ ಇಲ್ಲ. ಮತ್ತೆ ಗುಹೆಗೆ




ಬಂದ. ಹುಚ್ಚನಂತೆ ಅತ್ತ ಇತ್ತ ಓಡಾಡಿದ. ಏನೂ ತೋರದೆ ಮತ್ತೆ ದ್ವಾರದ ಹತ್ತಿರ ಬಂದು ನಿಂತು ಮಂತ್ರ ಪಠಿಸಿದ. ಆದರೆ ಎಷ್ಟು ಸಾರಿ ಹೇಳಿದರೂ ಈ ಬಾರಿ ಬಾಗಿಲು ತೆಗೆದುಕೊಳ್ಳಲಿಲ್ಲ. ಭಯವಾಯಿತು ಚಾಂಗ್‌ಗೆ.

ಅಷ್ಟರಲ್ಲಿ ಮೊದಲನೇ ದಿನ ಕಾಣಿಸಿದ ವೃದ್ಧ ಕೈಕೂ ಚಾಂಗ್‌ಗೆ ಪ್ರತ್ಯಕ್ಷವಾದ! "ಮಗೂ, ನಿನ್ನ ಅಜ್ಜಿ ನಿನಗಿನ್ನು ಸಿಗುವುದಿಲ್ಲ. ನೀನೀಗ ಗುಹೆಯೊಳಕ್ಕೆ ಕಳ್ಳತನದಿಂದ ಪ್ರವೇಶಮಾಡಿದಂತೆ, ಮತ್ತೆ ಯಾರೂ ಬರದಿರಲು ಆಕೆಯನ್ನು ಕಾವಲಿರಿಸಿರುವೆನು. ಹೋಗು. ಹೊರಟು ಹೋಗು" ಎಂದು ಸಿಟ್ಟಿನಿಂದ ಗದರಿಸಿಕೊಂಡನು.

ಅದಕ್ಕೆ ಚಾಂಗ್ "ತಾತ, ಅಜ್ಜಿ ನನ್ನ ಪ್ರಾಣ. ಆಕೆಯಿಲ್ಲದೆ ನಿಮಿಷವಾದರೂ ಇರಲಾರೆ. ನನ್ನನ್ನು ಬಿಟ್ಟು ಆಕೆ ಕ್ಷಣವಾದರೂ ಇರಲಾರಳು. ಆದುದರಿಂದ ಕೃಪೆ ತೋರಿ ಆಕೆಯನ್ನು ಬಿಟ್ಟುಬಿಡು. ಬುದ್ಧಿ ಬಂತು. ಮತ್ತೆಂದೂ ನಿನ್ನ ಅಪ್ಪಣೆಯಿಲ್ಲದೆ ಗುಹೆಯೊಳಗೆ ಪ್ರವೇಶಿಸುವುದಿಲ್ಲ" ಎಂದು ದೈನ್ಯತೆಯಿಂದ ಬೇಡಿಕೊಂಡ.

ಆಗ ತಾತ ಮುಸುಕಗೊಂಡು "ಮಗು, ಆಕೆಯನ್ನು ಬಿಡುವ ಮಾತು ಸುಳ್ಳು. ನೀನು ಅಷ್ಟಾಗಿ ಕೇಳಿಕೊಳ್ಳುತ್ತಿರುವೆಯಾದುದರಿಂದ ವರ್ಷಕ್ಕೊಂದು ಬಾರಿ ಬಂದು ನೀನಾಕೆಯನ್ನು ನೋಡಬಹುದು. ನೀನು ನೆನೆಸಿದಂತೆ ಆಕೆ ನಿನಗಾಗಿ ಏನೂ ಕಳವಳಪಡುತ್ತಿಲ್ಲ. ಇಲ್ಲಿ ಸುಖವಾಗಿಯೇ ಇದ್ದಾಳೆ. ನೀನು ಪಟ್ಟದರಸನ ಅಳಿಯನಾಗುವೆ ಎಂದು ಹೇಳಿದೆ. ಈ ಮಾತು ಕೇಳಿದಾಗಲಿಂದ ಆಕೆ ನಿಶ್ಚಿಂತೆಯಾಗಿರುವಳು" ಎಂದ. ಚಾಂಗ್ ಆಶ್ಚರ್ಯದಿಂದ "ಏನು ತಾತ, ನೀನು ತಮಾಷೆ ಮಾಡುತ್ತಿಲ್ಲವಷ್ಟೇ? ನಾನೆಂದರೇನು, ಪಟ್ಟದರಸನ ಅಳಿಯನಾಗುವುದೆಂದರೇನು?" ಎಂದು ಪ್ರಶ್ನೆಮಾಡಿದ.

"ಹುಡುಗನೇ ನಮ್ಮ ಬಾಯಿಂದ ಬರುವ ಮಾತು ವೃಥಾ ಆಗುವ ಸಂಭವವೇ ಇಲ್ಲ. ಹೋಗು. ನಿನಗೇಕೆ? ಹೊರಟು ಹೋಗು" ಎಂದು ಅವನನ್ನು ಕಳುಹಿಸಿಬಿಟ್ಟನು.

ತಾತನ ಮಾತಿನಲ್ಲಿ ನಂಬಿಕೆಯಿರಲಿ, ಇಲ್ಲದಿರಲಿ, ಮತ್ತೇನೂ ಮಾಡಲಾರದೆ

ಮನೆಗೆ ಮರಳಿದ ಚಾಂಗ್. ಪ್ರತಿವರ್ಷವೂ ಗುಹೆಗೆ ಹೋಗಿ ಅಜ್ಜಿಯನ್ನು ನೋಡಿಕೊಂಡು ಬರುವನು. ಹೀಗೆ ಅವನ ಜೀವನದಲ್ಲಿ ಹದಿನಾರು ವರ್ಷಗಳು ಉರುಳಿದವು.

* * *

ಚಾಂಗ್ ಮನೆಯ ಪಕ್ಕದಲ್ಲಿ ಬಡಕುಟುಂಬವೊಂದು ವಾಸಿಸುತ್ತಿತ್ತು. ಅವರು ಕಟ್ಟಿಗೆ ಸೀಳಿ ಮಾರಿ ಅದರಿಂದ ಜೀವಿಸುತ್ತಿದ್ದರು. ಪಾಪ ಆ ದಂಪತಿಗಳಿಗೆ ಸಂತತಿ ಇರಲಿಲ್ಲ.

ಒಂದುದಿನ ಆ ಮನೆಯ ಯಜಮಾನ ಸೌದೆಗಾಗಿ ಅಡವಿಗೆ ಹೋಗಲು ಒಂದು ಪೊದೆಯಿಂದ ಎಳೆಮಗುವಿನ ಆಕ್ರಂದನ ಕೇಳಿಸಿತು. ಹೋಗಿ ನೋಡಲು ಒಂದು ಅಂದವಾದ ಹೆಣ್ಣು ಮಗು ಕಾಣಿಸಿತು. ಇದು ದೇವರಪ್ರಸಾದವೆಂದು ಆತನು ಆ ಮಗುವನ್ನು ಮನೆಗೆ ತಂದು. ತುಂಬಾ ಅಕ್ಕರೆಯಿಂದ ಸಾಕುತ್ತಿದ್ದ. ಆ ಕಟ್ಟಿಗೆಯವನು ಮಗಳಿಗೆ ಯುಕ್ತವಯಸ್ಸು ಪ್ರಾಪ್ತವಾದ ಕೂಡಲೇ, ಚಾಂಗ್‌ನನ್ನು ಆದರದಿಂದ ಕರೆದು ಆ ಹುಡುಗಿಯನ್ನು ಕೊಟ್ಟು ಮದುವೆ ಮಾಡಿದ.

ಚಾಂಗ್ ಮತ್ತು ಅವನ ಮಡದಿ ಸುಖವಾಗಿ ಕಾಲ ಕಳೆಯುತ್ತಿದ್ದರು. ಹೀಗಿರುವಾಗ ಒಂದುದಿನ ಅವರ ಮನೆಗೆ ಇಬ್ಬರು ವ್ಯಕ್ತಿಗಳು ಬಂದರು. ಚಾಪೆ ಹಾಸಿ, ಚಾಂಗ್ ಅವರನ್ನು ಕುಳಿತುಕೊಳ್ಳುವಂತೆ ಹೇಳಿದ.



ಚಾಂಗ್ ಹೆಂಡತಿ ಅವರಿಗೆ ಪಾನೀಯ ತಂದುಕೊಟ್ಟಳು. ಹೊಸಲಲ್ಲಿ ಕಾಲಿಟ್ಟಾಗಲಿಂದ ಹೊಸದಾಗಿ ಬಂದಾಕೆ ಚಾಂಗ್ ಹೆಂಡತಿಯ ಕಡೆ ತನ್ನ ನೋಟವನ್ನು ನೆಟ್ಟಿಸಿದಳು. ಹತ್ತಿರ ಬಂದು ಪಾನೀಯ ಕೊಡುವಾಗ ಮತ್ತಷ್ಟು ಸೂಕ್ಷ್ಮವಾಗಿ ನೋಡಿದಳು. ಯಾರೋ, ಏನೋ ಚಾಂಗ್ ಹೆಂಡತಿ ಸಹ ಮೊದಲಿಂದಲೂ ಆಕೆಯನ್ನು ಕಣ್ಣರಳಿಸಿ ನೋಡುತ್ತಿದ್ದಳು. ಪಾನೀಯ ಕೊಡುವಾಗ ಮತ್ತಷ್ಟು ಎಚ್ಚರಿಕೆಯಿಂದ ನೋಡಿದಳು. ಅವರಿಬ್ಬರಲ್ಲಿ ಯಾವುದೋ ಒಂದುವಿಧವಾದ ಅವ್ಯಕ್ತ ಚೇತನವುಂಟಾಯಿತು. ಚಾಂಗ್ ಹೆಂಡತಿಯನ್ನು ಹೊಸದಾಗಿ ಬಂದಾಕೆ ಅಪ್ರಯತ್ನವಾಗಿ ಎದೆಗೆ ಅಪ್ಪಿಕೊಂಡಳು. ಚಾಂಗ್ ಹೆಂಡತಿ ಆಶ್ಚರ್ಯಗೊಂಡಳು.

ಅವರಿಬ್ಬರನ್ನು ಕಂಡು ಗಂಡು ವ್ಯಕ್ತಿ "ಏನೂ ನಮ್ಮ ಮಗುವೇ, ನಮ್ಮ ಮುದ್ದು ಮಗಳೇ" ಎಂದು ಹಿಡಿಸಲಾರದ ಆನಂದ ದಿಂದ ಚಾಂಗ್ ಹೆಂಡತಿಯನ್ನು ಹತ್ತಿರ ಕ್ಕೆಳೆದುಕೊಂಡ. ಚಾಂಗ್ ಬೆಕ್ಕಸಬೆರಗಾದ. ಏನೂ ಅರ್ಥವಾಗದು. ಅಷ್ಟರಲ್ಲಿ ರಾಜ ಪರಿವಾರವೆಲ್ಲಾ ಅಲ್ಲಿಗೆ ಬಂದು ಸೇರಿತು. "ನಮ್ಮ ಮಗು ನಮಗೆ ಸಿಕ್ಕಿದಳು. ನಮ್ಮ ಕಷ್ಟ ಫಲಿಸಿತು" ಎಂದು ತಮ್ಮ ಸಂತೋಷ ವನ್ನು ವ್ಯಕ್ತಪಡಿಸಿದರು. ಆಗ ತಿಳಿಯಿತು ಚಾಂಗ್‌ಗೆ. ತನ್ನ ಮನೆಗೆ ಬಂದ ದಂಪತಿ ಗಳು ರಾಜ-ರಾಣಿಯರೆಂದು; ತನ್ನ ಹೆಂಡತಿ ರಾಜಪುತ್ರಿ ಅಂತ!

ಆಗ ರಾಜನು ಚಾಂಗ್‌ನನ್ನು ಬರಸೆಳೆದು "ಅಪ್ಪಾ ಚಾಂಗ್, ಹನ್ನೆರಡು ವರ್ಷಗಳ ಕೆಳಗೆ ಅಪರೂಪವಾಗಿ ಹುಟ್ಟಿದ ಈ ಮಗು ವಿಗೆ ಪ್ರೇಮದಿಂದ ಮೈ ತುಂಬಾ ಆಭರಣ ಗಳನ್ನು ಹಾಕಿದ್ದವು. ಯಾರೋ ದುರ್ಮಾರ್ಗಿ ಗಳು ಮಗುವನ್ನೆತ್ತಿಕೊಂಡು ಹೋಗಿ, ಒಡವೆಗಳನ್ನು ಅಪಹರಿಸಿ, ಮಗುವನ್ನು ಅಡವಿಯಲ್ಲಿ ಬಿಟ್ಟುಬಿಟ್ಟರು. ಅಂದಿನಿಂದ ತಿಂಡಿ ತೀರ್ಥವಿಲ್ಲದೆ ಮಾರುವೇಷದಿಂದ ಈ ರೀತಿ ಮಗಳಿಗಾಗಿ ಅಲೆದಾಡುತ್ತಿರುವೆವು. ದೇವರ ದಯೆಯಿಂದ ನಮ್ಮ ಕಷ್ಟಗಳು ಇಂ ದಿಗೆ ಮುಗಿಯಿತು. ಅದೃಷ್ಟವಂತರು ನಾವು" ಎಂದ. "ನೀವಲ್ಲ ಅದೃಷ್ಟವಂತರು ನಾವು" ಎಂದ ಚಾಂಗ್ ಆನಂದದಿಂದ.

ಚಾಂಗ್ ತನ್ನ ಅಜ್ಜಿಯನ್ನು ನೋಡಿ ಬರ ಬೇಕಾದ ದಿನ ಅಂದೇ ಆಗಿತ್ತು. ಆದುದರಿಂದ ದಂಪತಿಗಳನ್ನೂ ಪರಿವಾರವನ್ನೂ ಸಹ ಸಂಗಡ ಕರೆದುಕೊಂಡು ಹೋಗಿ, ಚಾಂಗ್ ಗುಹೆಯ ಕೌತುಕಗಳೆಲ್ಲವನ್ನೂ ಅವರಿಗೆ ತೋರಿಸಿದ. ಚಾಂಗ್ ಮತ್ತು ಅವನ ಮಡದಿ ಮುದುಕಿಯ ಆಶೀರ್ವಾದ ಪಡೆ ದರು. ಚಾಂಗ್ ತಾತನಿಗೆ ನಮಸ್ಕಾರಮಾಡಿ 'ತಾತ, ಅಂದು ನಂಬಲಾರದೆ ಹೋದರೂ ನಿಮ್ಮ ಮಾತು ಅಕ್ಷರಶಃ ನಿಜವಾಯಿತು" ಎಂದ. ತಾತ ಕಿರುನಗೆ ಸೂಸಿದ. ಬಹಳ ಸಂತೋಷದಿಂದ ಎಲ್ಲರೂ ಅರಮನೆಗೆ ತೆರಳಿದರು.






ಸಾತನೂರಿನಲ್ಲಿ ಶಂಕರಪ್ಪ ಅಂತ ಒಬ್ಬ ನಿಗರ್ವಿ ಸಾಹುಕಾರರಿದ್ದರು. ಅವರ ನೆರೆಮನೆಯಲ್ಲಿ ಗಿರಿಜಾಂಬ ಅಂತ ಹತ್ತು ವರ್ಷದ ಹುಡುಗಿಯಿದ್ದಳು. ಗಿರಿಜಾಂಬ ಐದನೇ ತರಗತಿಯಲ್ಲಿ ಓದುತ್ತಿದ್ದಳು. ಆ ಹುಡುಗಿಗೆ ಸರ್ವಜ್ಞ ವಚನಗಳು, ಬಸವೇಶ್ವರನ ವಚನಗಳು ಎಷ್ಟೋ ಬರುತ್ತಿದ್ದವು. ಆ ಹುಡುಗಿ ಓದುವ ವಚನಗಳೆಲ್ಲಾ ಶಂಕರಪ್ಪನಿಗೆ ಕೇಳಿಸುತಿತ್ತು. "ಆಹಾ, ಕೋಕಿಲಕಂಠ. ಎಷ್ಟು ಸೊಗುಸಾಗಿ ಓದ್ತಾಳೆ ಗಿರಿಜ" ಎಂದು ಮೆಚ್ಚಿಕೊಳ್ಳುವರು ಆ ಹುಡುಗಿಯನ್ನು.

ಒಂದು ದಿನ ಗಿರಿಜಾಂಬ ಸರ್ವಜ್ಞ ವಚನಗಳಲ್ಲಿ ಒಂದು ಪದ ಈ ರೀತಿ ಓದುತ್ತಿದ್ದಳು:

ಕಲ್ಲುಪ್ಪು ಕರ್ಪುರವು। ಸೊಲ್ಲೆರಡು
ಧಾತೊಂದು। ಖುಲ್ಲ ನೊಳ್ಳಿದನ–
ರೂಪೊಂದು। ಗುಣದೊಳಗೆ ಎಲ್ಲ
ಅಂತರವು। ಸರ್ವಜ್ಞ.

ಜಗಲಿಮೇಲೆ ಹಲ್ಲು ಉಜ್ಜಿಕೊಳ್ಳುತ್ತಿದ್ದ ಸಾಹುಕಾರ ಶಂಕರಪ್ಪನವರು ಗಿರಿಜಾಂಬೆಯನ್ನು ಹತ್ತಿರಕ್ಕೆ ಕರೆದು, ಕುಳಿತು ಕೊಳ್ಳುವಂತೆ ಹೇಳಿ "ಗಿರಿಜಾ ಬಹಳ ಸೊಗುಸಾಗಿ ಓದಿದೆ ತಾಯಿ ವಚನಾನ. ತಾಯಿ, ಅದರ ಅರ್ಥ ಹೇಳಮ್ಮಾ" ಎಂದರು.

ಆತನು ಕೇಳಿದ್ದೇ ತಡ, ಗಿರಿಜಾಂಬ "ಅರ್ಥಕ್ಕೇನಿದೆ ಮಾವಯ್ಯ-ಉಪ್ಪು, ಕರ್ಪೂರ ಎರಡೂ ನೋಡಲು ಬೆಳ್ಳಗೇ ಇರುತ್ತೆ. ಬಾಯಿಯಲ್ಲಿ ಹಾಕಿಕೊಂಡರೆ ಮಾತ್ರ ಉಪ್ಪು ಒಗರಾಗಿರುತ್ತೆ. ಕರ್ಪೂರ ಹಾಗಲ್ಲ. ಘಮಘಮನೆಂದು ಪಸಂದಾಗಿರುತ್ತೆ. ಹಾಗೆಯೇ ಮನುಷ್ಯರಲ್ಲಿ ಒಳ್ಳೆಯವರೂ, ಕೆಟ್ಟವರೂ ರೂಪದಲ್ಲಿ ನೋಡಲು ಒಂದೇ ರೀತಿಯಾಗಿ ಕಾಣಬಂದರೂ ಅವರ ಗುಣಗಳಲ್ಲಿ ಭೇದವಿರುತ್ತದೆ" ಎಂದು ಹೇಳಿದಳು.

"ಆಹಾಹಾ, ಸುಲಿದ ಬಾಳೆಹಣ್ಣಿನಂತೆ ಹೇಳಿದೆ ತಾಯಿ" ಎಂದು ಮೆಚ್ಚಿಕೊಂಡು, ಸಾಹುಕಾರರು ಒಳಗೆ ಹೋಗಿ, ಬಾಳೆಹಣ್ಣಿನ ಚಿಪ್ಪೊಂದು ತಂದು ಗಿರಿಜಾಂಬೆಗೆ ಬಹುಮಾನವಾಗಿ ಕೊಟ್ಟು ಕಳುಹಿಸಿದರು.

ಪಿ. ವಿ. ರಾಮಚಂದ್ರಮೂರ್ತಿ, ಮದರಾಸು.





ಓಡೋಡಿ ಬಂದು ಗುಂಪು ಸೇರಿದವು. ಆದರೆ ಹುಂಜಗಳಲ್ಲೊಂದು ಅವುಗಳನ್ನು ಹತ್ತಿರಕ್ಕೆ ಬರದಂತೆ ಕೊಕ್ಕಿನಿಂದ ಚುಚ್ಚಿ ಓಡಿಸಿ, ಕಾಳೆಲ್ಲಾ ತಾನು ಮುಕ್ಕಲು ಪ್ರಾರಂಭಿಸಿತು. ಆಗ ಅವು ಎರಡನೇ ಹುಂಜದ ಹತ್ತಿರ ಬಿದ್ದಿದ್ದ ಕಾಳಿಗಾಗಿ ಅತ್ತ ಹೋದವು. ಆ ಎರಡನೇ ಹುಂಜ ಅವುಗಳನ್ನು ಹತ್ತಿರಕ್ಕೆ ಬರಮಾಡಿ ಕೊಂಡು, ಅವು ಹೊಟ್ಟೆತುಂಬಾ ತಿಂದು ಹೋಗುವವರೆಗೂ ತಾನೊಂದುಕಡೆ ಸುಮ್ಮನೆ ನೋಡುತ್ತಾ ನಿಂತಿತ್ತು.

ಒಂದು ಹುಂಜ ಸ್ವಾರ್ಥತೆಯಿಂದ ಕೋಳಿ ಮರಿಗಳನ್ನು ಹತ್ತಿರ ಸೇರಿಸದೆ ಓಡಿಸು ವುದೂ, ಎರಡನೇ ಹುಂಜ ಅವುಗಳನ್ನು ಹತ್ತಿರಕ್ಕೆ ಬರಮಾಡಿಕೊಂಡು ಆದರಿಸುವು ದನ್ನೂ ಕಂಡು ಸಾಹುಕಾರರಿಗೆ ಆಶ್ಚರ್ಯ ವಾಯಿತು. ರೂಪು ಕಂಡರೆ ಎರಡು ಹುಂಜ ಗಳೂ ಒಂದೇ ರೀತಿಯಿವೆ. ಎಲ್ಲಾ ಒಂದೇ ಹೋಲಿಕೆ. ಆದರೆ ಗುಣದಲ್ಲಿ ಎಷ್ಟು ತಾರ ತಮ್ಯ! ಸಾಹುಕಾರರಿಗೆ ಗಿರಿಜಾಂಬ ಓದಿದ ವಚನಜ್ಞಾಪಕಕ್ಕೆ ಬಂತು. "ಹುಂಜಗಳ ರೂಪೊಂದು। ಗುಣದೊಳಗೆ। ಎಲ್ಲ ಅಂತರವು ಸರ್ವಜ್ಞ।" ಎಂದು ವಚನ ಬದಲಾಯಿಸಿ ಹಾಡಿದರು.

ಆತರುವಾಯ ಸಾಹುಕಾರರು ತಮ್ಮ ವ್ಯಾಪಾರದ ಗಡಿಬಿಡಿಯಲ್ಲಿ ಸರ್ವಜ್ಞ ವಚನ, ಹುಂಜಗಳ ನಡತೆ ಎಲ್ಲಾ ಮರೆತು ಬಿಟ್ಟರು.

ಆ ಪದಗಳಲ್ಲಿ ಅಡಗಿರುವ ಭಾವ ಉನ್ನತ ವಾಗಿದೆ ಎಂದೆನಿಸಿತು ಆತನಿಗೆ "ಪುರುಷ ರೆಲ್ಲಾ ಒಂದೇ ರೀತಿ ಕಾಣಬಂದರೂ ಅವರಲ್ಲಿ ಉತ್ತಮ ಪುರುಷರು ಬೇರೆ ಎಂದು ಹೇಳಲು ಸರ್ವಜ್ಞ ಎಷ್ಟು ಒಳ್ಳೇ ಹೋಲಿಕೆ ಕೊಟ್ಟಿ ದ್ದಾನೆ" ಎಂದು ಮೆಚ್ಚಿಕೊಳ್ಳುತ್ತಾ ತಮ್ಮ ಮನೆ ಹಿತ್ತಲಿಗೆ ಹೋದರು. ಅವರಿಗೆ ಅಲ್ಲಿ ಎರಡು ಹುಂಜಗಳು ಕಾಣಿಸಿದವು. ಆ ಹುಂಜ ಗಳಿಗೆ ಅನತಿದೂರದಲ್ಲಿ ಕೋಳಿಗಳೂ, ಅದರ ಮರಿಗಳೂ ತಮ್ಮ ತಮ್ಮ ಕೊಕ್ಕುಗಳಿಂದ ಆಹಾರ ತೆಗೆದು ಕೊಳ್ಳುತ್ತಿದ್ದವು.

ಇಷ್ಟರಲ್ಲಿ ಸಾಹುಕಾರರ ಆಳು ಬಂದು ಎರಡು ಹುಂಜಗಳು ಮುಂದೆ ಒಂದೊಂದು ಹಿಡಿ ಕಾಳು ಎರಚಿ ಒಳಗೆ ಹೋದನು. ಕೋಳಿಗಳು, ಮರಿಗಳು ಕಾಳಿಗಾಗಿ

ಮಾರನೆಯ ದಿನ ಅವರ ಬೀಗರು—ಅಂದರೆ ಮಗಳ ಮಾವ—ಕೆಲಸದನಿಮಿತ್ತ ಅವರ ಮನೆಗೆ ಬಂದರು. ಸಾಹುಕಾರರ ಸತಿ ಶೀಲಮ್ಮ ಅಡಿಗೆಯವನೊಂದಿಗೆ "ಬೀಗರು ಬಂದಿದ್ದಾರೆ. ಕೋಳಿ ಮಾಂಸ ಅಡಿಗೆ ಮಾಡಬೇಕು" ಎಂದು ಹೇಳುತ್ತಿರುವುದು ಸಾಹುಕಾರರ ಕಿವಿಗೆ ಬಿತ್ತು.

ಸಾಹುಕಾರರು ಅಡಿಗೆಯವನನ್ನು ಕೂಗಿ "ಆ ದುಷ್ಟ ಹುಂಜವನ್ನು ಕೊಂದು ಬಿಡು" ಎಂದರು.

ಅಡಿಗೆಯವನಿಗೆ ಈ ಮಾತು ಅರ್ಥವಾಗಲಿಲ್ಲ. "ಹುಂಜಗಳಲ್ಲಿ ಒಳ್ಳೇದೂ, ಕೆಟ್ಟದು ಅಂತ ಇದೆಯೆ?" ಎಂದು ಅನ್ನಿಸಿತು ಅವನಿಗೆ. "ಯಾವ ಹುಂಜದ ವಿಷಯ ತಾವು ಅಪ್ಪಣೆ ಕೊಡಿಸುತ್ತಿರುವುದು? ನನ್ನ ಕಣ್ಣಿಗೆ ಎರಡೂ ಒಂದೇ ರೀತಿಯಾಗಿ ಕಾಣಿಸುತ್ತಿವೆ" ಎಂದ ಅಡಿಗೆಯವ.

"ನಡಿ ಅದನ್ನ ನಾನು ತೋರಿಸುತ್ತೇನೆ" ಎಂದು ಸಾಹುಕಾರರು ಅಡಿಗೆಯವನನ್ನು ಸಂಗಡ ಕರೆದುಕೊಂಡು ಹಿತ್ತಲಿಗೆ ಹೋದರು. ಎರಡು ಹುಂಜಗಳೂ ದೂರ ದೂರ ನಿಂತಿದ್ದವು. ನೋಡಿದರೆ ಅವುಗಳಲ್ಲಿ ಒಳ್ಳೆಯ ಹುಂಜ ಯಾವುದೋ, ಕೆಟ್ಟದು ಯಾವುದೋ ಸಾಹುಕಾರರಿಗೇ ತಿಳಿಯಲಿಲ್ಲ!

ಒಂದು ನಿಮಿಷ ಆಲೋಚಿಸಿ "ಒಂದು ಹಿಡಿ ಕಾಳು ತೆಗೆದು ಕೊಂಡು ಬಾ, ಅವು



ಗಳಲ್ಲಿರುವ ಭೇದವೇನೋ ಹೇಳುವೆನು" ಎಂದರು.

ಅಡಿಗೆಯವನು ಕಾಳು ತಂದು ಹಾಕಿದ. ಕೂಡಲೇ ಒಂದು ಹುಂಜ ಬಾಣದಂತೆ ಬಂದು ಕಾಳನ್ನು ನುಂಗಲು ಆರಂಭಿಸಿತು. ಎರಡನೇ ಹುಂಜ ಸಹ ಬಂದು ತಿನ್ನಲು ಪ್ರಯತ್ನಿಸಿತು. ಆದರೆ ಮೊದಲನೇ ಹುಂಜ ಅದನ್ನು ದೂರ ಓಡಿಸಿ, ತಾನು ಮಾತ್ರ ನುಂಗಲು ಪ್ರಾರಂಭಿಸಿತು.

"ಇದೇಕಣೋ, ನಾನು ಹೇಳಿದ ಹುಂಜ" ಎಂದರು ಸಾಹುಕಾರರು. ಅಡಿಗೆಯವನು ಆ ಹುಂಜವನ್ನು ಅಂದು ಕೊಂದು ಅಡಿಗೆ ಮಾಡಿದ. ಮನಸ್ಸಿಗೆ ಮೆಚ್ಚಿದ ಪುಣ್ಯ ಹುಂಜವನ್ನು ಅತಿ ಮಮತೆಯಿಂದ ನೋಡಿಕೊಳ್ಳುತ್ತಿದ್ದರು ಸಾಹುಕಾರರು!




## ಆಟದ ಆವೇಶ

ಒಂದೂರಿನಲ್ಲಿ ಮೂವರು ಸ್ನೇಹಿತರಿದ್ದರು. ಅವರಿಗೆ ಜೂಜಾಡುವುದೇ ಕಸಬು. ಒಂದು ದಿನ ಅವರು ಆಟ ಆಡಿದಾಗ ಅವರಲ್ಲಿ ಇಬ್ಬರು ಗೆದ್ದರು. ಮೂರನೆಯವನು ಸೋತು ಓಡಿ ಹೋದ. ಸೋತು ಹೋದುದು ಮಾತ್ರವೇ ಅಲ್ಲ. ಕೈಯಲ್ಲಿ ಕಾಸಿಲ್ಲದೆ ಮಿಕ್ಕಿಬ್ಬರ ಹಣ ತೀರಿಸಲಾರದೇ ಹೋದ. ಅವರು ಸುಮ್ಮನಿರಲಾರದೆ "ನಮ್ಮ ಹಣ ಕೊಟ್ಟುಬಿಟ್ಟು ಬೇಕಾದರೆ ಹೋಗು" ಎಂದು ಮೂರನೆಯವನನ್ನು ನಿರ್ಬಂಧಿಸಿದರು.

ಮೂರನೆಯವನು ಧನಹೀನನಾಗಿದ್ದಾನೆ. ಕೈಯಲ್ಲಿ ಕಾಸಿಲ್ಲ. ಇವರ ಕಾಟವೋ ಮಿತಿ ಮೀರಿದೆ. ಇವರ ಹತ್ತಿರದಿಂದ ಹೇಗೆ ತಪ್ಪಿಸಿಕೊಳ್ಳಲಿ ಎಂದು ತುಂಬಾ ಹೊತ್ತು ಯೋಚಿಸಿದ. ಏನೂ ಉಪಾಯ ತೋರಲಿಲ್ಲ. ಅವರಿಬ್ಬರೂ ಪರಧ್ಯಾನದಲ್ಲಿರುವಾಗ ಒಂದು ಹಿಡಿ ಮಣ್ಣೆತ್ತಿ ಅವರ ಮುಖಕ್ಕೆ ಎರಚಿದ. ಅಲ್ಲಿಂದ ಕಂಬಿ ಕಿತ್ತ. ಅವರು ಕಣ್ಣಲ್ಲಿ ಬಿದ್ದ ಮಣ್ಣನ್ನು ಒರಸಿಕೊಂಡು ಸ್ವಲ್ಪ ಸುಧಾರಿಸಿಕೊಂಡ ತರುವಾಯ ಮೋಸಮಾಡಿದ ಮೂರನೆಯವನಿಗಾಗಿ ಹುಡುಕಾಡಿದರು. ಆದರೆ ಅವನು ಎಲ್ಲೂ ಕಾಣಿಸಲಿಲ್ಲ. ಅವನು ಓಡಿ ಹೋಗಿ ಒಂದು ತೋಟದಲ್ಲಿ ಮಾವಿನ ಮರ ಹತ್ತಿ ನೆರಳಲ್ಲಿ ಕುಳಿತಿದ್ದ. ಆ ಮರದ ಕೆಳಗೆ ತಣ್ಣಗೆ ಇದ್ದುದರಿಂದ ಆ ಇಬ್ಬರು ಜೂಜುಗಾರರು ಸಹ ಅಲ್ಲಿಗೇ ಬಂದರು. ವಿಶ್ರಮಿಸಿಕೊಳ್ಳಲು ಅದರಡಿ ಕುಳಿತರು. "ಸುಮ್ಮನೆ ಯಾಕೆ ಕುಳಿತಿರಬೇಕು" ಎಂದು ಅನ್ನಿಸಿತು ಅವರಿಗೆ. ಆಟ ಪ್ರಾರಂಭಿಸಿದರು.

ಆಟ ಪ್ರಾರಂಭಿಸಿದ ತುಸಹೊತ್ತಿಗೆಲ್ಲಾ ರಂಗೇರಿತು. ಇದೆಲ್ಲವನ್ನೂ ಮರದಮೇಲಿಂದ ನೋಡುತ್ತಿದ್ದ ಆ ಮೂರನೇಯವನಿಗೆ ಇದ್ದಕ್ಕಿದ್ದಂತೆ ಉದ್ರೇಕವುಂಟಾಯಿತು. "ಮುಂದಿನ ಆಟಕ್ಕೆ ನಾನೂ ಬರ್ತೇನ್ರೋ" ಎಂದು ಗಬಕ್ಕನೆ ಮರದಿಂದ ಧುಮಿಕಿದ. "ಸಿಕ್ಕಿದ ಕಳ್ಳಾ" ಎಂದು ಜೂಜುಗಾರರಿಬ್ಬರೂ ಆ ಮೂರನೆಯವನನ್ನು ಚೆನ್ನಾಗಿ ಥಳಿಸಿ, ತಮ್ಮ ಸೇಡುತೀರಿಸಿಕೊಂಡರು.

## ರಂಗಯ್ಯನ ಕೊಡೆ ವ್ಯಾಪಾರ

ನಾಗರಹಳ್ಳಿಯಲ್ಲಿ ರಂಗಯ್ಯ ಅಂತ ಒಬ್ಬ ಸಾಹುಕಾರನಿದ್ದ. ಆತ ಕಡು ಲೋಭಿ.

ಒಂದು ಸಾರಿ ರಂಗಯ್ಯ ಕೆಲಸದಮೇಲೆ ಪಟ್ಟಣಕ್ಕೆ ಹೋಗಬೇಕಾಗಿ ಬಂತು. ಈ ವಿಷಯ ತಿಳಿದು ಆತನ ಸ್ನೇಹಿತನಾದ ಸುಬ್ಬಣ್ಣ "ಲೋ, ರಂಗಯ್ಯ ನೀನು ಹೋಗೋದು ನಗರಕ್ಕೆ—ಅಲ್ಲೀ ವರ್ತಕರು ಒಂದಕ್ಕೆ ಎರಡರಷ್ಟು ಬೆಲೆ ಹೇಳಿ ಮೋಸ ಮಾಡ್ತಾರೆ. ಆದ್ದರಿಂದ ಹುಷಾರಾಗಿರು" ಎಂದು ಎಚ್ಚರಿಕೆ ಕೊಟ್ಟ.

ರಂಗಯ್ಯ ನಗರಕ್ಕೆ ಬಂದು ತನ್ನ ಕೆಲಸಗಳನ್ನೆಲ್ಲಾ ವ್ಯವಸ್ಥೆ ಮಾಡುವಷ್ಟರಲ್ಲಿ ಮಟಮಟ ಮಧ್ಯಾಹ್ನವಾಯಿತು. ಮೇಲೆ ತಲೆ, ಕೆಳಗೆ ಕಾಲು ಸುಡುತ್ತಿದೆ. ಆದುದರಿಂದ ಛತ್ರಿಗಳಿರುವ ಅಂಗಡಿಗೆ ಹೋದ. ಒಂದು ಕೊಡೆ ತೆಗೆದು "ಏನಿದರ ಬೆಲೆ" ಎಂದ. ಹತ್ತು ರೂಪಾಯಿ ರಾಯ್ರೆ" ಎಂದ ಅಂಗಡಿಯವ. ಕೂಡಲೇ ರಂಗಯ್ಯ ಯೋಚಿಸಿದ. 'ಒಂದಕ್ಕೆ ಎರಡರಷ್ಟು ಹೇಳಿ ಮೋಸಮಾಡುವರೆಂದಲ್ಲವೇ ಸುಬ್ಬಣ್ಣ ಹೇಳಿದ. ಈ ಕೊಡೆ ಅಸಲು ಬೆಲೆ ಐದು ರೂಪಾಯಿಗಳಿರಬೇಕು' ಎಂದುಕೊಂಡು "ಐದು ರೂಪಾಯಿಗೆ ಕೊಟ್ಟರೆ ಕೊಡಿ. ಇಲ್ಲದಿದ್ದರೆ ಬೇಡ" ಎಂದ. ಹಾಗೇ ಹೀಗೆ ಚಾಕಾಸಿಮಾಡಿ ಕೊನೆಗೆ ಐದು ರೂಪಾಯಿಗೇ ಕೊಡಲು ಆ ವರ್ತಕ ಒಪ್ಪಿಕೊಂಡ. ವರ್ತಕನು ಕೊಡಲು ಸಿದ್ಧವಾದರೆ 'ಇದರ ಬೆಲೆ ಅದರಲ್ಲಿ ಅರ್ಧವಿರಬೇಕು' ಎಂದುಕೊಂಡು ರಂಗಯ್ಯ "ಅಯ್ಯಾ ಎರಡೂವರೆಗೆ ಕೊಟ್ಟರೆ ಕೊಡು. ಇಲ್ಲದಿದ್ದರೆ ಬೇಡ" ಎಂದು ಖಂಡಿತವಾಗಿ ನುಡಿದ.

ವರ್ತಕನಿಗೆ ಬೇಜಾರಾಗಿ "ಹಳ್ಳಿ, ಗಿರಾಕಿಯಪ್ಪಾ ನೀನು. ಅಷ್ಟುತಾನೆ ಏಕೆ? ಬಿಟ್ಟಿ ತೆಗೆದುಕೊಂಡು ಹೋಗು" ಎಂದ ಸಿಟ್ಟಿನಿಂದ. ಆಗ ರಂಗಯ್ಯ 'ವರ್ತಕ ಒಂದು ಕೊಡೆ ಉಚಿತವಾಗಿ ಕೊಡುವನೆಂದರೆ ಅಸಲು ಅವನು ಎರಡು ಕೊಡಬೇಕೇನೋ' ಎಂದು ಲೆಕ್ಕ ಹಾಕಿ "ಎಲಾ ಅಯ್ಯಾ, ಎರಡು ಕೊಟ್ಟರೆ ತೆಗೆದುಕೊಂಡು ಹೋಗ್ತೇನೇ ಹೊರತು ಒಂದೇ ಆದರೆ ಬೇಡ" ಎಂದ. ಅಲ್ಲಿದ್ದವರೆಲ್ಲಾ ಪಕಪಕನೆ ನಕ್ಕರು.

ಸಂಣದೊಂದು ಮಂಚ
ಅದರ ಮೇಲೆ ಕೆಂಚ
ಮಲಗಿಕೊಂಡು
ಮನದಿ ಏನೋ
ಹಾಕುತಿದ್ದ ಹೊಂಚ.

ರನ್ನನೊಬ್ಬ ಮಹ ಕವಿ
ಅವನ ಕಾವ್ಯ ಬಲು ಸವಿ
ಕನ್ನಡ ಸಾಹಿತ್ಯ
ಬಾನಿನಲ್ಲಿ
ಮೆರೆವನಾರವಿ.

[ಹೊ. ವಿ. ಬ್ಯಾಳಿಯವರ]



# ವಿಚಿತ್ರ ಕಳ್ಳರು

ಕಾಶಿಕಾನಗರದಲ್ಲಿ ಹಿಂದೆ ಕಬೀರದಾಸನೆಂಬ ರಾಮ ಭಕ್ತನಿದ್ದ. ಆತನಿಗೆ ಕಮಾಲ್ ಎಂಬ ಕುಮಾರನಿದ್ದ. ಆತನೂ ಸಹ ರಾಮಭಕ್ತ. ಕಬೀರ್ ಜನ್ಮತಃ ಬಡವನೇ ಆಗಿದ್ದರೂ, ಯಾವಾಗ ಎಷ್ಟು ಜನ ಸಾಧುಗಳು ಬಂದರೂ ಇಲ್ಲವೆಂದ ಹೇಳದೆ ಹೊಟ್ಟೆ ತುಂಬಾ ಊಟ ಹಾಕಿ ಸತ್ಕರಿಸುವನು. ಈ ರೀತಿ ಸತ್ಕಾರ ಮಾಡುವುದರಲ್ಲಿ ತಂದೆಗೆ ಅನುಕೂಲವಾಗಿದ್ದ ಕಮಾಲ್.

ಒಂದು ದಿನ ಮಧ್ಯರಾತ್ರಿ ಅಕಸ್ಮಾತ್ ಆಗಿ ಕಬೀರನ ಕುಟೀರಕ್ಕೆ ಸಾಧುಗಳ ದೊಡ್ಡ ಗುಂಪೊಂದು ಬಂದು "ಅಯ್ಯಾ, ಇಲ್ಲೆಲ್ಲೋ ಕಬೀರ್ ದಾಸನೆಂಬ ಭಕ್ತನಿದ್ದಾನಂತೆ. ಪರಸ್ಥಳದ ಸಾಧುಗಳಿಗೆ ಹೊಟ್ಟೆ ತುಂಬ ಅನ್ನದಾನಮಾಡುವನಂತೆ. ಆತನ ಮನೆಯೆಲ್ಲಿರುವುದೋ ಸ್ವಲ್ಪ ತೋರಿಸುವಿರಾ?" ಎಂದು ಕೇಳಿದರು. ಆಗ ಹೊಸ್ತಿಲಲ್ಲೇ ನಿಂತಿದ್ದ ಕಬೀರ್ ದಾಸನು ಅವರನ್ನು ನೋಡಿ ಮರುಕಗೊಂಡು "ಅಯ್ಯಾ ನೀವು ಕೇಳಿದ ಕಬೀರ್ ನಾನೇ! ದಯಮಾಡಿಸಿ" ಎಂದು ಹೇಳಿ ಅವರನ್ನು ಕುಳ್ಳಿರಿಸಿ, ಮನೆಯೊಳಕ್ಕೆ ಹೋದ. ಗಾಢನಿದ್ದೆಯಲ್ಲಿದ್ದ ಪತ್ನಿ ಸುಂದರಾದೇವಿಯನ್ನು ಎಬ್ಬಿಸಿ "ಬಹಳ ಜನ ಸಾಧುಗಳು ಹಠಾತ್ತನೆ ಬಂದಿದ್ದಾರೆ ಏನು ಮಾಡುವುದು?" ಎಂದು ಕೇಳಿದ.

ಅದಕ್ಕೆ ಸುಂದರಾದೇವಿ "ನಾಥಾ, ಪರಮೇಶ್ವರನು ನಮ್ಮನ್ನು ಪರೀಕ್ಷಿಸುತ್ತಿರುವಂತಿದೆ. ನೀವೇನೂ ಗಾಭರಿಪಡಬೇಡಿ. ಇಂಥಾ ಸಮಯದಲ್ಲಿ ಸಾಲವೋ ತುಡುಗೋ ಮಾಡಿ ಧನ ಸಂಪಾದಿಸಿ ಭಾಗವತಾರಾಧನೆ ಮಾಡಬಹುದೆಂದು ಹೇಳುವರು ಹಿರಿಯರು. ಇದರಿಂದ ನಮಗೇನೂ ಪಾಪ ಸೊಂಕುವುದಿಲ್ಲ" ಎಂದು ಸಲಹೆ ಇತ್ತಳು. ಕಮಾಲ್ ಸಹ ಈ ಮಾತುಗಳನ್ನು ಪುಷ್ಟೀಕರಿಸಿ "ಕಳ್ಳತನಮಾಡಿಯಾದರೂ ಸರಿ ಸಾಧುಗಳಿಗೆ ಸಂ

ಯನ್. ವಸಂತಕುಮಾರಿ, ಬೊಂಬಾಯಿ.

ತರ್ಪಣೆ ಮಾಡಬೇಕು" ಎಂದು ತಂದೆಯನ್ನು ಪ್ರೋತ್ಸಾಹಿಸಿದ.

ಇಷ್ಟವಿಲ್ಲದಿದ್ದರೂ ಕಬೀರ್ ಒಪ್ಪಿಕೊಳ್ಳಲೇ ಬೇಕಾಗಿ ಬಂತು. ಭಗವಂತನ ಮೇಲೆ ಭಾರ ಹಾಕಿ, ಆಚೆ ಬೀದಿ ಕೊನೆಯಲ್ಲಿದ್ದ ವರ್ತಕನ ಮನೆಗೆ ಕನ್ನ ಹಾಕೋಣವೆಂದು ತಂದೆ ಮಕ್ಕಳಿಬ್ಬರೂ ಹೊರಟರು. ಬೇಗ ಹೋಗಿ ವರ್ತಕನ ಮನೆಗೆ ಕನ್ನ ಕೊರೆದರು. ಆ ಕನ್ನದಿಂದ ಮಗನನ್ನು ಒಳಗೆ ಕಳುಹಿಸಿ, ಕಬೀರ್ ಹೊರಗೇ ನಿಂತ.



ಒಳಗೆ ಪ್ರವೇಶಿಸಿ ನೋಡಲು ಶೆಟ್ಟಿ ಮನೆಯಲ್ಲಿದ್ದ ನವರತ್ನರಾಶಿಗಳು ಕಮಾಲನ ಕಣ್ಣುಗಳನ್ನು ಕೋರೈಸಿದವು. ಆತನು ಅತ್ತಕಡೆ ಗಮನವೇ ಕೊಡಲಿಲ್ಲ. ಹಾಗೇ ಹುಡುಕಿಕೊಂಡು ಹೋಗಲು ಒಳಗೆ ಚೀಲಗಳಲ್ಲಿ ಬೇಕಾದಷ್ಟು ಆಹಾರಸಾಮಗ್ರಿಗಳು ಕಾಣಿಸಿದವು. ಆ ಪದಾರ್ಥಗಳನ್ನು ತೆಗೆದು ಹೊರಗೆ ನಿಂತಿದ್ದ ತಂದೆಗೆ ಕೊಡುತ್ತಾ ಬಂದ. ತಮಗೆ ಬೇಕಾಗುವಷ್ಟು ಸಾಮಾನುಗಳನ್ನು ಶೇಖರಿಸಿದ ಮೇಲೆ ಕಮಾಲ್ ಸಂತೃಪ್ತನಾಗಿ, ನಿದ್ದೆ ಮಾಡುತ್ತಿದ್ದ ವರ್ತಕನನ್ನು ತಟ್ಟಿ ಎಬ್ಬಿಸಿ "ಶೆಟ್ರೇ, ಸಾಧು ಸಂತರ್ಪಣೆಗಾಗಿ ಅತ್ಯಾವಶ್ಯಕವಾದ ಆಹಾರಸಾಮಗ್ರಿಗಳನ್ನು ತೆಗೆದುಕೊಂಡು ಹೋಗುತ್ತಿದ್ದೇನೆ. ಅಷ್ಟೇ. ನಿನ್ನ ಧನಕನಕವಸ್ತುವಾಹನಗಳೇನೂ ಮುಟ್ಟಿಲ್ಲ. ಈ ಮಾತು ಹೇಳಿ ಹೋಗುವ ಸಲುವಾಗಿ ನಿನ್ನನ್ನು ಎಬ್ಬಿಸಿದೆ. ನಿದ್ದೆ ಹಾಳು ಮಾಡಿದೆನೆಂದು ಅನ್ಯಥಾ ಭಾವಿಸಬೇಡ" ಎಂದು ಕನ್ನದಿಂದ ತೂರಿ ಹೋಗಲು ಸಿದ್ಧನಾದ. ಈ ವಿಚಿತ್ರ ವರ್ತನೆಯನ್ನು ಕಂಡು ಶೆಟ್ಟಿ ಆಶ್ಚರ್ಯಚಕಿತನಾಗಿ ಆ ಹುಡುಗನನ್ನು ಹಿಂಬಾಲಿಸಿದ. ಕನ್ನದಲ್ಲಿ ತೂರಿ ಹೋಗುತ್ತಿದ್ದ ಕಮಾಲಿನ ಕಾಲುಗಳೆರಡನ್ನೂ ಗಟ್ಟಿಯಾಗಿ ಹಿಡಿದು ಹಿಂದಕ್ಕೆ ಎಳೆದ. ಇದನ್ನು ಕಂಡು ಹೊರಗಿದ್ದ ಕಬೀರ್ ಮಗನ ತಲೆ ಹಿಡಿದು ತನ್ನ ಕಡೆಗೆ ಎಳೆಯಲು ಉದ್ಯುಕ್ತನಾದ. ಆಗ ಕಮಾಲ್ "ಅಪ್ಪಾ ಇನ್ನು ಲಾಭವಿಲ್ಲ. ಗುರುತು ಸಿಕ್ಕದಂತೆ ನನ್ನ ತಲೆ ಕಡಿದು ತೆಗೆದುಕೊಂಡು ಹೋಗು"




ಎಂದ. "ಅಯ್ಯೋ ಎಂತಹ ಅವಸ್ಥೆ ಬಂತು ದೇವರೇ" ಎಂದುಕೊಂಡು ಕಬೀರ್ ಮಗನ ತಲೆ ತುಂಡರಿಸಿ ಕಂಕುಳಲ್ಲಿಟ್ಟುಕೊಂಡು ಓಡಿದ. ಮನೆ ಸೇರಿಕೊಂಡು ಹೆಂಡತಿಗೆ ಧೈರ್ಯ ಹೇಳಿ ಕಳ್ಳತನದಿಂದ ತಂದ ಪದಾರ್ಥಗಳಿಂದ ಬೇಗ ಬೇಗ ಅಡಿಗೆ ಮಾಡಿಸಿದ. ಸಾಧು ಸಂತರನ್ನೂ ಕೂಗಿ, ಸಾಲಾಗಿ ಕುಳ್ಳಿರಿಸಿ, ಎಲೆಗಳಲ್ಲಿ ಅನ್ನ ಬಡಿಸಿ "ಅಯ್ಯಾ ತಡವಾಯಿತು ಕ್ಷಮಿಸಬೇಕು" ಎಂದು ಕೈ ಜೋಡಿಸಿ ನಿಂತುಕೊಂಡ.

* * *

ಇಲ್ಲಿ ಈ ವಿಷಯ ಈ ರೀತಿ ಯಿರುವಲ್ಲಿ ಅಲ್ಲೇನು ನಡೆಯಿತು ಗೊತ್ತೇ? ಕನ್ನಡ ಆಚೆ ಯಿದ್ದ ಕಬೀರ್ ಯಾವಾಗ ಮಗನ ತಲೆ ಕಡಿದು ಕಂಕುಳಲ್ಲಿಟ್ಟುಕೊಂಡು ಹೋದನೋ ಆ ಕ್ಷಣವೇ ಕಮಾಲನ ಕಾಲನ್ನು ಹಿಡಿದುಕೊಂಡಿದ್ದ ವರ್ತಕ ಮುಂಡದೊಂದಿಗೆ ಹಿಂದಕ್ಕೆ ಬಿದ್ದು ಕಿಟಾರನೆ ಕಿರಿಚಿದ. ಆ ಧ್ವನಿ ಕೇಳಿ ಸುತ್ತಮುತ್ತಲಿದ್ದ ಜನ ಅಲ್ಲಿಗೆ ಬಂದು ಸೇರಿದರು. ನಡೆದ ವಿಷಯ ಕೇಳಿ ಎಲ್ಲರೂ ಆಶ್ಚರ್ಯಪಟ್ಟರು.

ಈ ಸುದ್ದಿ ಒಂದೇ ಒಂದು ನಿಮಿಷದಲ್ಲಿ ಊರೆಲ್ಲಾ ಹರಡಿತು. ರಾಜನ ಕಿವಿಗೂ ಮುಟ್ಟಿತು. ರಾಜನೂ ಸಹ ಆಚ್ಚರಿಗೊಂಡ. "ಏನು, ನನ್ನ ರಾಜ್ಯದಲ್ಲಿ ಇಂತಹ ಕೊಲೆಗಳು ನಡೆಯುತ್ತಿವೆಯೇ?" ಎಂದುಕೊಂಡು ರಕ್ಷಕ ಭಟರನ್ನು ಕರೆಸಿ, "ಈ ಮುಂಡವನ್ನು ಕೋಟೆ ಹೆಬ್ಬಾಗಿಲಿಗೆ ನೇತು ಹಾಕಿ, ತುಂಬಾ ಜಾಗರೂಕರಾಗಿ ಕಾದುಕೊಂಡಿರಿ. ಇದನ್ನು ಕಂಡು ಯಾರು ದುಃಖ ಪಡುವರೋ ಅವರನ್ನು ಕೂಡಲೇ ಕರೆದುತನ್ನಿ" ಎಂದು ಆಜ್ಞಾಪಿಸಿದ. ಈ ವಿಷಯ ರಾಜ್ಯದಲ್ಲಿ ಹರಡಿತು. ಜನರೆಲ್ಲಾ ಗುಂಪುಗೂಡಿ, ಮುಂಡವನ್ನು ಕಂಡು ತಲಾ ಒಂದು ಮಾತು ಆಡುತ್ತಿದ್ದರು.

* * *

ಕಬೀರ್ ಆತಿಥ್ಯವನ್ನು ಪಡೆದ ಸಾಧು ಸಂತರು "ಅಯ್ಯಾ ಅರ್ಧರಾತ್ರಿ, ಅಪರಾತ್ರಿ ಎನ್ನದೆ ನೀನು ನಮ್ಮನ್ನು ತುಂಬಾ ಆದರದಿಂದ ಸತ್ಕರಿಸಿದುದಕ್ಕೆ ನಮಗೆ ಸಂತೋಷವಾಯಿತು. ನೀನು ಮಾಡಿಬಡಿಸಿದ ಮೃಷ್ಟಾನ್ನ

ದಿಂದ ಸಂತುಷ್ಟರಾದೆವು. ಭಗವಂತನ ಕೃಪಾ ಕಟಾಕ್ಷದಿಂದ ನಿನ್ನ ಕೋರಿಕೆಗಳೆಲ್ಲಾ ಸಿದ್ಧಿಸಲಿ" ಎಂದು ಆಶೀರ್ವಾದ ಮಾಡಿದರು.

ಇದ್ದಕ್ಕಿದ್ದಂತೆಯೇ ಆ ಸಾಧುಗಳ ಗುಂಪಿನಲ್ಲಿ ಹಿರಿಯನೊಬ್ಬನು "ಅರೆ, ಮರೆತೇಬಿಟ್ಟೆವಲ್ಲಾ. ನಿಮ್ಮ ಹುಡುಗನೆಲ್ಲಿ" ಎಂದು ಕೇಳಿದ. ಅದಕ್ಕೆ ಕಬೀರ್ ಯಾವುದೋ ಒಂದು ಸಬೂಬು ಹೇಳಿ ತಪ್ಪಿಸಿಕೊಳ್ಳಲು ಯತ್ನಿಸಿದ.

ಹಾಗೇ ಮಾತಾಡುತ್ತಾ ಅವರು ಕೋಟೆ ಹೆಬ್ಬಾಗಿಲಿಗೆ ಬಂದರು. ಅವರಿಗೆ ಅಲ್ಲಿ ನೆರೆದಿದ್ದ ಜನ ಸಮೂಹ ಕಾಣಿಸಿತು. ಅವರು ಮಾಡುತ್ತಿದ್ದ ಗಲಭೆ ಕೇಳಿಸಿತು. ಆಗ ಅವರಲ್ಲಿ ಹಿರಿಯನು ಜನರಿಂದ ವಿಷಯವನ್ನೆಲ್ಲಾ ಕೇಳಿ ತಿಳಿದುಕೊಂಡು ಆಶ್ಚರ್ಯಪಟ್ಟ. "ಅರೆರೆ, ಎಂಥ ಅನ್ಯಾಯ ನಡೆಯಿತು. ಯಾವ ದುಷ್ಟ ಈ ಕಾರ್ಯ ಮಾಡಿದನೋ! ಕೈಯ ಮೇಲೆ, ಮುಂಡದ ಮೇಲೆ ಇರುವ ನಾಮಗಳನ್ನು ನೋಡಿದರೆ, ಹುಡುಗ ವೈಷ್ಣವ ದಾಸನಂತೆ ತೋರುವುದು. ಬಟ್ಟೆಬರೆ ನೋಡಿದರೆ ತುರುಕರ ರೀತಿಯಲ್ಲಿ ಉಟ್ಟಿರುವನು. ಇಂಥ ಸಾತ್ವಿಕನು ಕಳ್ಳತನ ಮಾಡಲು ಹೋಗಿ ತುಂಡರಿಸಲ್ಪಟ್ಟನೆಂದರೆ ಇದು ತಂದೆ ಮಕ್ಕಳ ನಡುವೆ ನಡೆದಿರಬೇಕೆಂದು ಕಾಣಿಸುತ್ತದೆ" ಎಂದ ವ್ಯಾಕುಲದಿಂದ ನುಡಿದ.

ಈ ಮಾತಿಗೆ ಕಬೀರ್ ಬೆಚ್ಚಿಬಿದ್ದು "ಸ್ವಾಮಿ ತುರಕನಾದರೇನು, ವೈಷ್ಣವನಾದರೇನು.




ಪರೋಪಕಾರಕ್ಕಾಗಿ ತನ್ನ ಪ್ರಾಣವನ್ನು ಅರ್ಪಿಸಿದನಾದ್ದರಿಂದ ಆತನ ಜನ್ಮ ಸಾರ್ಥಕವಾದಂತೆ ಆಯಿತಲ್ಲವೇ" ಎಂದ.

ಅದಕ್ಕೆ ಸಾಧುಗಳಲ್ಲಿ ಹಿರಿಯನು ವಿಸ್ಮಯಗೊಂಡು "ಎಲೈ ಮುಂಡವೇ, ಕಬೀರ್ ಹೇಳಿದ ಮಾತು ಸತ್ಯವೇ ಆದಪಕ್ಷಕ್ಕೆ ನಿನ್ನ ಜನ್ಮ ಉತ್ತಮ ಜನ್ಮವಾಗಬೇಕು" ಎಂದು ಹೇಳಲು, ಆಮುಂಡವು "ನಿಜ ನಿಜ"ಎಂದಂತೆ ಚಪ್ಪಳೆ ತಟ್ಟುತ್ತಾ ಮೇಲಿಂದ ದುಮುಕಿ, ಚಿತ್ರವಿಚಿತ್ರವಾಗಿ ನಾಟ್ಯ ಮಾಡುತಿತ್ತು.

ಇದನ್ನು ಕಂಡು ಜನರೆಲ್ಲಾ ಆನಂದದಲ್ಲಿ ಮುಳುಗಿದರು. ಆಗ ಆ ಕಪಟಸನ್ಯಾಸಿ "ಹೌದಪ್ಪಾ, ಕಬೀರ್. ನಿನಗೆ ಈ ಸಂಗತಿ ತಿಳಿದಿರಬೇಕು. ಮರೆಮಾಚದೆ ನಿಜನುಡಿ" ಎಂದು ಒತ್ತಿ ಕೇಳಲು, ಕಬೀರನು ಆತನ

ಪಾದಗಳಮೇಲೆ ಬಿದ್ದು, ಕ್ಷಮಾಪಣೆ ಕೇಳಿ, ನಡೆದ ವಿಷಯವನ್ನೆಲ್ಲಾ ಮಣಿ ಪೋಣಿಸಿ ದಂತೆ ಹೇಳಿದ. ಆಗ ಸನ್ಯಾಸಿ ಕುಪಿತನಾಗಿ "ಎಲವೋ, ನೀಚಾ, ನೀನು ಕಳ್ಳನು ಮಾತ್ರ ವಲ್ಲ; ಪುತ್ರಹಂತಕ, ಶಿಶು ಹಂತಕ. ಪರಮ ಪಾತಕನಾದ ನಿನ್ನ ಕೈ ಅನ್ನ ನಮಗೆ ಉಣ ಬಡಿಸಿದೆಯಾ? ಸಾಧುಗಳು ಇಂತಹ ಕೆಲಸ ಮಾಡುವರೆಂದು ನಾನು ನಂಬುವುದಿಲ್ಲ" ಎಂದ. ಆತನಿಗೆ ನಂಬಿಕೆಯುಂಟಾಗುವಂತೆ ಕಬೀರನು ತನ್ನ ಪತ್ನಿಯನ್ನು ಮನೆಗೆ ಕಳು ಹಿಸಿ, ಮಗನ ರುಂಡವನ್ನು ತರಿಸಿದ.

ಆ ಸನ್ಯಾಸಿ ಆ ತಲೆಯನ್ನು ತೆಗೆದು ಕೊಂಡು ಅತ್ತಿತ್ತ ತಿರುಗಿಸಿ ನೋಡಿ "ಎಲೈ, ಇಷ್ಟು ಸಣ್ಣ ತಲೆ ಎಂದರೇನು, ಅಷ್ಟು ಭಾರಿ ಕಳೇಬರವೇನು. ಆದರೂ ಆ ಮುಂಡಕ್ಕೆ ಈ ತಲೆ ತಗಲಿಸಿನೋಡುವಾ" ಎಂದು ಅದನ್ನು ತಗುಲಿಸಲು, ಆ ಮುಂಡಕ್ಕೆ ಆ ರುಂಡ ಸರಿ ಯಾಗಿ ಅಂಟಿಕೊಂಡಿತು. ಈ ಮಹಿಮೆ ನೋಡಿ ಜನರೆಲ್ಲಾ ಆಶ್ಚರ್ಯ ಪಟ್ಟರು. ಕಮಾಲನು ನಿದ್ದೆಯಿಂದ ಎಚ್ಚತ್ತಂತೆ ಎದ್ದು, ತಂದೆ ತಾಯಿಗಳಿಗೆ ಪ್ರದಕ್ಷಿಣೆ ಮಾಡಿ, ನಮಸ್ಕಾರ ಮಾಡಿದ. ಅವರು ಮಗನನ್ನು ನೋಡುತ್ತಾ ವೈಮರೆತಿರುವಲ್ಲಿ, ಆ ಸಾಧು ಗಳ ಗುಂಪು ಮಾಯವಾಗಿ, ಸೀತಾ ಲಕ್ಷ್ಮಣ ಭರತ ಶತ್ರುಘ್ನ ಹನುಮಂತರ ಸಮೇತ ಶ್ರೀರಾಮಚಂದ್ರಮೂರ್ತಿ, ಮತ್ತು ಆತನ ಪರಿವಾರ ಪ್ರತ್ಯಕ್ಷವಾದರು. ಕಬೀರ್, ಕಮಾಲ್, ಸುಂದರಾದೇವಿ ಕೈಮುಗಿಯುತ್ತಾ, ಅವನ ಇಷ್ಟದೇವರನ್ನು ಪರಿಪರಿವಿಧದಲ್ಲಿ ಸ್ತೋತ್ರ ಮಾಡಿದರು.

ಈ ಸಂಗತಿ ವರ್ತಕನಿಗೆ ತಿಳಿದು ಆತನು ಕಮಾಲನ ಪಾದಗಳಮೇಲೆ ಬಿದ್ದು "ಭಕ್ತ ಶಿಖಾಮಣಿ ನಾನು ಪರಮಪಾಪಿ. ಅಪರಾಧ ವನ್ನು ಮನ್ನಿಸು" ಎಂದು ಬೇಡಿಕೊಳ್ಳಲು, "ಎಲೈ ಶೆಟ್ಟಿ, ನೀನೇನು ಚಿಂತಿಸಬೇಕಾಗಿಲ್ಲ. ನಿನ್ನ ಮೂಲಕ ನಮಗೆ ಶ್ರೀರಾಮಮೂರ್ತಿಯ ದರ್ಶನ ಭಾಗ್ಯವುಂಟಾಯಿತು" ಎಂದು ಹೇಳಿ ಆತನಿಗೆ ತಾರಕ ಮಂತ್ರವನ್ನು ಉಪ ದೇಶ ಮಾಡಿದ. ಅಂದಿನಿಂದ ವರ್ತಕನು ತನ್ನ ಧನವನ್ನು ಭಕ್ತರ ನಿತ್ಯಸಂತರ್ಪಣೆಗಾಗಿ ವಿನಿಯೋಗಿಸುತ್ತಾ ಒಳ್ಳೇ ಹೆಸರೂ, ಕೀರ್ತಿ ಸಂಪಾದಿಸಿದನು.



## ಸಂಪಿಗೆ ಹೂ

ಹೋಗಲು ಎಲ್ಲಿಯು
ಮನೆಯೇ ಇಲ್ಲ
ಆಡುವೆನೆಂದರೆ
ಅಕ್ಕನು ಇಲ್ಲ
ಕವಿತೆಯ ರಚಿಸಲು
ಮನಸೇ ಇಲ್ಲ
ಅಂಗಳದಲ್ಲಿಯ
ಸಂಪಿಗೆ ಹೂವೆ

ನಿನ್ನನು ಕುರಿತೇ
ಬರೆಯುವೆನು
ಏನು ಬರೆಯಲಿ
ಹೂವೇ ಹೇಳು
ಮನಸಿಗೆ ಕಂಡುದ
ಹೇಳುವೆ ಕೇಳು
ಮಿನುಗುವ ದೀಪಕೆ
ಹೋಲಿಸಲಾರೆ
ನಿನಗಿದು ಅಪಮಾನ
ಮಿಂಚಿನ ಹುಳುವಿಗೆ
ಹೋಲಿಸಲಾರೆ
ನಿನಗಿದು ಸುಮ್ಮಾನ
ಹೂವಿನ ಗುಂಪಿನ
ರಾಶಿಯೊಳೆಲ್ಲ
ನಿನ್ನನು ಆರಿಸಿ
ತೆಗೆಯುವರು

## ಪಟಿಂಗ

ಘಣ ಘಣ ಹೊಡೆಯಿತು
ಶಾಲೆಯ ಘಂಟೆ
ಶಾಲೆಗೆ ಹೋಗಲು
ರಂಗನ ತಂಟೆ
ಚೊಂಯ್ ಚೊಂಯ್ ಎಂದಿತು
ಬಿಸಿಬಿಸಿ ದೋಸೆ
ರಂಗನು ಮರೆತನು
ಪಾಠದ ಆಸೆ
ಶಾಲೆಗೆ ಹೋದರೆ
ಮೇಷ್ಟರ ಕಾಟ
ಮನೆಯಲಿ ಉಳಿದರೆ
ಆಟವೆ ಆಟ
ಹೀಗೆಯೆ ಆದ
ರಂಗ ಪಟಿಂಗ।

—ಎಂ. ನಾರಾಯಣ ರಾವ್.

ಸಂಪಿಗೆ ಹೂವಿನ
ಪರಿಮಳವೆಂದರೆ
ಮೂಗಿಗೆ ಗಮ ಗಮ
ಎನ್ನುವುದು
ಹೋಗಲು ಮನೆಯು
ದೊರಕುವವರೆಗೂ
ಆಡಲು ಅಕ್ಕನು
ಬರುವುವವರೆಗೂ
ನಿನ್ನನು ಕುರಿತೇ
ಹಾಡುವೆನು.

ಶ್ರೀ ಟಿ. ಮಹಾಬಲೇಶ್ವರ ಭಟ್ಟ, ಸಾಗರ.

## ಆಸು ಎಲ್ಲಿ ಹೋಯಿತು ?

ಈ ತಮಾಷೆ ಮಾಡಿ ನೋಡಿ ಪ್ರೇಕ್ಷಕರನ್ನು ತುಂಬಾ ಬೆರಗು ಗೊಳಿಸಬಹುದು. ಈ ಆಟಕ್ಕೆ ಪ್ರತ್ಯೇಕವಾಗಿ ತಯಾರಿಸಿದ ಇಸ್ಪೀಟು ಪ್ಯಾಕು ಅವಶ್ಯಕವಿಲ್ಲ. ಸಾಧಾರಣವಾದ ಪ್ಯಾಕನ್ನೊಂದು ತೆಗೆದುಕೊಂಡು ಬಂದು ಇಂದ್ರಜಾಲಕನು ಅದರಲ್ಲಿ ನಾಲ್ಕು ಆಸುಗಳನ್ನು ಮೊದಲು ಹೊರಕ್ಕೆ ತೆಗೆದು, ಮಿಕ್ಕ ಎಲೆಗಳೊಂದಿಗೆ ಪ್ಯಾಕನ್ನು ಸಭಿಕರಲ್ಲೊಬ್ಬನಿಗೆ ಕೊಡಬೇಕು. ಇಂದ್ರಜಾಲಕನು ಆ ನಾಲ್ಕು ಆಸುಗಳನ್ನು ಈ ಕೆಳಗೆ ಕಾಣಿಸಿದ ಚಿತ್ರದಲ್ಲಿ ತೋರಿಸಿರುವ ಪ್ರಕಾರ ಮೇಜಿನ ಮೇಲೆ ಹರಡಿ ತೋರಿಸಬೇಕು. ಆ ತರುವಾಯ ಆ ನಾಲ್ಕು ಎಲೆಗಳನ್ನೂ ಕಲೆಸಿ, ಪ್ರೇಕ್ಷಕನ ಕೈಗೆ ಕೊಟ್ಟಿದ್ದ ಪ್ಯಾಕನ್ನು ಕೇಳಿ ತೆಗೆದುಕೊಂಡು ಅವುಗಳೊಂದಿಗೆ ಮತ್ತೆ ಕಲೆಸಿ, ಪೂರ್ತಿ ಪ್ಯಾಕನ್ನು ಪುನಃ ಸಭಿಕನ ಕಿಸೆಯಲ್ಲೇ ಇಟ್ಟುಬಿಡಬೇಕು. "ವನ್–ಟೂ–ತ್ರೀ! ನಿಮ್ಮ ಕಿಸೆಯನ್ನು ಭದ್ರವಾಗಿಟ್ಟುಕೊಳ್ಳಿ" ಎಂದು ಹೇಳಬೇಕು. ಆ ಪ್ರೇಕ್ಷಕನು ಕಿಸೆಯನ್ನು ಭದ್ರವಾಗಿ ಹಿಡಿದಿಟ್ಟುಕೊಳ್ಳುವನು. "ವನ್–ಟೂ–ತ್ರೀ! ನಿಮ್ಮ ಹತ್ತಿರ ಪ್ಯಾಕಿನಲ್ಲಿರುವ ಆಸುಗಳನ್ನು ಇಲ್ಲಿ ಕೊಡಿ" ಎಂದು ಕೇಳಬೇಕು. ಪ್ರೇಕ್ಷಕನು ತನ್ನ ಕಿಸೆಯಲ್ಲಿರುವ ಪ್ಯಾಕನ್ನು ತೆಗೆದು ನೋಡಿದರೆ ಮೂರು ಆಸುಗಳು ಮಾತ್ರವಿರುತ್ತವೆ. ಕಳಾವರು ಆಸು ಕಾಣಿಸುವುದಿಲ್ಲ. ಆಗ ಮಂತ್ರವಾದಿ ಕಳಾವರು ಆಸನ್ನು ತನ್ನ ಜೋಬಿನಲ್ಲಿರುವ

ಮನಿಪರ್ಸ್‌ನಿಂದ ತೆಗೆದು ತೋರಿಸುವನು. ಇದರ ರಹಸ್ಯ ಇಷ್ಟೇ.

ಇಂದ್ರಜಾಲಕನು ಮೊದಲೇ ಕಳಾವರು ಆಸನ್ನು ತನ್ನ ಪರ್ಸ್‌ನಲ್ಲಿಟ್ಟುಕೊಂಡಿರಬೇಕು. ಪ್ರೇಕ್ಷಕರಿಗೆ ನಾಲ್ಕು ಆಸುಗಳನ್ನು ತೋರಿಸುವಾಗ ಕಳಾವರು ಆಸಿಗೆ ಬದಲಾಗಿ ಐದನೇ ನಂಬರು ಎಲೆಯನ್ನು ತೆಗೆದುಕೊಂಡು, ಅದರಲ್ಲಿರುವ ನಾಲ್ಕು ಗುರುತುಗಳನ್ನು ಮಿಕ್ಕ ಮೂರು ಎಲೆಗಳು ಅಂದರೆ—ಡೈಮಂಡ್, ಆಟೀನ್, ಇಸ್ಪೇಟು ಆಸುಗಳಿಂದ ಚಿತ್ರದಲ್ಲಿ ಕಾಣಿಸಿರುವಂತೆ ಮುಚ್ಚಿಬಿಡಬೇಕು. ಮಧ್ಯ ಕಾಣಿಸುವ ಒಂದೇ ಗುರುತನ್ನು ನೋಡಿ ಪ್ರೇಕ್ಷಕರು ಅದೂ ಸಹ ಆಸೆಂದೇ ತಿಳಿಯುವರು. ಇಂದ್ರಜಾಲಕನು ಆ ಮೂರು ಆಸುಗಳನ್ನು ಪ್ರೇಕ್ಷಕರಿಗೆ ತೋರಿಸಿ, ಅವರ ಕೈಯಿಂದ ಮಿಕ್ಕ ಪ್ಯಾಕನ್ನು ತೆಗೆದುಕೊಂಡು, ಅದರೊಂದಿಗೆ ಕಲೆಸಿ, ಕಿಸೆಯಲ್ಲಿಟ್ಟುಕೊಳ್ಳುವಂತೆ ಹೇಳುವನು. ತರುವಾಯ ಆ ಪ್ಯಾಕು ತೆಗೆದು ಎಷ್ಟು ಹುಡಿಕಿದರೂ ಕಳಾವರು ಆಸು ಕಾಣಿಸುವುದಿಲ್ಲ. "ಆಸು ಏನಾಯಿತು." ಎಂದು ಜನ ನಾಲ್ಕೂಕಡೆಯಿಂದಲೂ ಕೇಳುವರು.

ಆಗ ಮಂತ್ರಗಾರನು ನಸುನಗುತ್ತಾ ತನ್ನ ಕಿಸೆಯಲ್ಲಿದ್ದ ಮನಿಪರ್ಸ್ ತೆಗೆದು ಅದರಲ್ಲಿ ಬಚ್ಚಿಟ್ಟಿದ್ದ ಕಳಾವರ್ ಆಸು ಎತ್ತಿ "ಇದೋ ಇಲ್ಲಿದೆ" ಎಂದು ತೋರಿಸುವನು.

**ಪ್ರೊಫೆಸರ್ ಪಿ. ಸಿ. ಸರ್ಕಾರ್ ಮೆಜಿಷಿಯನ್,**
**12/3/A, ಜಮಿರ್ ಲೇನ್, ಬಾಲಿಗಂಜ್**
**ಕಲಕತ್ತಾ-19**

## ಒಂದೇ ಗೆರೆಯ ಚಿತ್ರ



ಕೆ. ಆರ್ಮುಗಂ, ಶಿಲ್ಲೋಂಗ್.

## ನಗೆಹನಿ

ದಾರಿಹೋಕ—ಲೋ ಅಣ್ಣಯ್ಯ ನಿನ್ನ ಮುಂಡಾಸನ್ನು ರಾವು ಎಳೆದುಕೊಂಡುಹೋದುದಕ್ಕೆ ಇಲ್ಲಿ ಸ್ಮಶಾನದಲ್ಲಿ ಯಾಕೆ ಬಂದು ಕುಳಿತಿದ್ದೀ?

ಮುಂಡಾಸಿನ ವ್ಯಕ್ತಿ—ಇಂದು ಅವ ತಪ್ಪಿಸಿಕೊಂಡು ಹೋದರೆ ಹೋಗಲಯ್ಯಾ. ಎಂದಾದರೂ ಅವನು ಇಲ್ಲಿಗೆ ಬಂದೇ ತೀರಬೇಕು.

—ಬಿ. ರಘುರಾಮ ರಾವ್.

# ‘ಬಣ್ಣ ಹಾಕಿ’ 5-ನೇ ಚಿತ್ರದ ಕಥೆ

ಎಷ್ಟೋ ಪ್ರಯಾಸ ಪಟ್ಟು ಕಡೆಗೆ ಆ ಮರಕ್ಕೆ ಸುತ್ತಿಕೊಂಡಿದ್ದ ಸರ್ಪವನ್ನು ಹೇಗೋ ಸಂಹರಿಸಿದ ರಾಜಕುಮಾರ. ನಂತರ ಮರದ ಮೇಲೆ ಹತ್ತತೊಡಗಿದ. ಆದರೆ ಅಷ್ಟು ಕಷ್ಟಪಟ್ಟು ಹತ್ತಿರ ಹೋದೊಡನೆ ಹಕ್ಕಿ ಪುರ್ರನೆ ಹಾರಿ ಹೋದರೆ ಏನು ಗತಿ! ಆ ಹೆದರಿಕೆಯಿಂದಲೇ ಬಹಳ ಜಾಗರೂಕನಾಗಿ ಹತ್ತಿದ. ಗಿಣಿ ಕದಲಲಿಲ್ಲ. ಫಕ್ಕನೆ ಗಿಣಿಯನ್ನು ಹಿಡಿದು ರಾಜಕುಮಾರ ಗೆದ್ದೆನೆಂದುಕೊಂಡ. ಅದನ್ನು ಜೇಬಿನಲ್ಲಿ ಭದ್ರಪಡಿಸಿ ಕೆಳಗಿಳಿದು ನಡೆದ. ಕೆಲದಿನಗಳಲ್ಲೇ ಮಹಲನ್ನು ಸೇರಿಕೊಂಡು ಮಹಾನುಭಾವನ ಮುಂದೆ ಗಿಣಿಯನ್ನಿಟ್ಟ. ಆದರೆ ಪುನಃ ವಿಚಿತ್ರ! ಪಂಚರಂಗಿನ ಗಿಣಿಗೆ ಬದಲು ಅಲ್ಲಿ ಕೆಂಪುರಂಗಿನ ಗಿಣಿಯಿದೆ. ರಾಜಕುಮಾರನಿಗೆ ದಿಗ್ಭ್ರಮೆಯುಂಟಾಯಿತು. ಬೆಳಗಾಯಿತು. ಮಾಂತ್ರಗಾರನು ಮೌನವನ್ನು ಮುರಿದನು. ಕೆಂಪು ಗಿಣಿ ಪುನಃ ಪಂಚವರ್ಣದ ಗಿಣಿಯಾಯಿತು. ರಾಜಕುಮಾರನಿಗೆ ಜೀವ ಬಂದಂತಾಯಿತು. ಆ ಮಹಾನುಭಾವನು ರಾಜಕುಮಾರನ ಹತ್ತಿರ ಬಂದು “ನೆನ್ನೆ ಈ ಗಿಣಿ ಕೆಂಪಾಗಿದ್ದುದನ್ನು ಕಂಡು ಗಾಭರಿಯಾದೆಯಲ್ಲವೆ? ಇದರ ರಹಸ್ಯ ಕೇಳು. ಅಮಾವಾಸ್ಯೆಯ ಒಂದು ದಿನವೇ ಇದು ಪಂಚವರ್ಣ ಧರಿಸುವುದು. ಮಿಕ್ಕೆಲ್ಲ ದಿನಗಳಲ್ಲಿ ದಿನಕ್ಕೊಂದು ಬಣ್ಣ ಬದಲಾಯಿಸುವುದು. ಅಂತೂ ಕೆಲಸ ಸಾಧಿಸಿದೆಯಲ್ಲ! ಸಂತೋಷ” ಎಂದು ಬೆನ್ನು ತಟ್ಟಿದ. “ಆದರೆ ಇನ್ನೊಂದು ಷರತ್ತಿದೆ. ನಿನಗೆ ಮಗು ಹುಟ್ಟಿದ ಮರುಕ್ಷಣ ನೀನೋ ಅಥವಾ ಆ ಮಗುವೋ ನನ್ನ ದೇವಿಗೆ ಬಲಿಯಾಗಬೇಕು. ಮಾತು ಕೊಟ್ಟರೆ ನಿನ್ನ ರಾಜಕುಮಾರಿಗೆ ಮಾಮೂಲು ರೂಪ ಬರುವ ಮಾರ್ಗ ತಿಳಿಸುತ್ತೇನೆ” ಎಂದು ಮತ್ತೆ ಹೇಳಿದ. ಇದು ಕೇಳಿ ರಾಜಕುಮಾರನಿಗೆ ಚಿಂತೆಯಾಯಿತು. ಉತ್ತರ ಕೊಡಲೇಬೇಕು. ಅದಕ್ಕಾಗಿ “ಸರಿ, ಏನೋ ಒಂದು ಮಾಡುತ್ತೇನೆ” ಎಂದು ಹೇಳಿ ಬಿಟ್ಟ ರಾಜಕುಮಾರ.

ಮಹಾನುಭಾವನು ಆ ಪಂಚವರ್ಣದ ಗಿಣಿಯ ಒಂದು ಗರಿಯನ್ನು ಕಿತ್ತು ರಾಜಕುಮಾರನಿಗೆ ಕೊಟ್ಟನು. “ಇದನ್ನು ಸುಟ್ಟು ಆ ಹೊಗೆಯನ್ನು ಗಿಣಿ ರೂಪದಲ್ಲಿರುವ ರಾಜಕುಮಾರಿಗೆ ಸೋಕಿಸು, ಹೋಗು. ವಾಗ್ದಾನ ಮಾತ್ರ ಮರೆಯಬೇಡ” ಎಂದು ಹೇಳಿ ಕಳುಹಿಸಿದನು.

ರಾಜಕುಮಾರ ಮನೆ ಸೇರಿಕೊಂಡ. ಗಿಣಿಗೆ ಧೂಪ ಹಾಕಲು ಏರ್ಪಾಟು ಮಾಡಿದ. ಮಹಾನುಭಾವನು ಹೇಳಿದ ಷರತ್ತನ್ನು ಆಸ್ಥಾನ ವಿದ್ವಾಂಸನಿಗೆ ಮಾತ್ರ ತಿಳಿಸಿದ. ಆದುದರಿಂದ ಆತನಿಗೆ ಸಂತೋಷಕ್ಕೆ ಬದಲು ಚಿಂತೆಯುಂಟಾಯಿತು. ಆದರೆ ಈ ವಿಷಯ ತಿಳಿಯ.ದ ರಾಜ ರಾಣಿ ಮತ್ತಿತರರು ಆನಂದ ಸಾಗರದಲ್ಲಿ ಮುಳುಗಿದರು.




ಬಣ್ಣ ಹಾಕಿರಿ (ಕಥೆ) 6-ನೆ ಬೊಂಬೆ

# ಮಾಡಿ ನೋಡಿ

ಚೆಚ್ಚೌಕವುಳ್ಳ ಒಂದು ಮರದ ಪೆಟ್ಟಿಗೆ ತೆಗೆದುಕೋ. ನಿನಗೆ ಎದುರಾಗಿರುವ ಕಡೆಯ ಹಲಗೆಯನ್ನು ಕಿತ್ತು ಹಾಕು. ಅದರ ನಡುವೆ ಗುಂಡಾಗಿರುವ ದೊಡ್ಡದೊಂದು ವೆಜ್ಜ ಮಾಡಿ ಒಂದುಕಡೆ ಇಟ್ಟುಕೊ. ನೀರಿನಿಂದ ತುಂಬಿರುವ ಒಂದು ಗ್ಲಾಸು ತೆಗೆದುಕೊಂಡು ಪೆಟ್ಟಿಗೆಯಲ್ಲಿ ಕೆಳಗಿನ ಚಿತ್ರದಲ್ಲಿರುವಂತೆ



ಇಡು. ಅದೇ ಹಲಗೆಯ ಮೇಲೆ ಪಠಗಳಿಗೆ ಹಾಕುವಂಥ ಸಾದಾ ಗಾಜನ್ನು ಕೋಣಸ್ಥವಾಗಿ ಇಡು. ಈ ಗಾಜಿನ ಈಚೆಕಡೆ ಒಂದು ಮೇಣದ ಬತ್ತಿ ಹಚ್ಚಿಸಿ ನಿಲ್ಲಿಸು. ತರುವಾಯ ಮೊದಲು ರಂಧ್ರ ಮಾಡಿಟ್ಟುಕೊಂಡಿದ್ದ ಹಲಗೆಯಿಂದ ಪೆಟ್ಟಿಗೆಯನ್ನು ಮುಚ್ಚಿಡು. ಈಗ ರಂಧ್ರದಿಂದ ನೋಡಿದರೆ ಮೊಂಬತ್ತಿ ಗ್ಲಾಸಿನಲ್ಲಿರುವ ನೀರಿನಲ್ಲಿ ಉರಿಯುತ್ತಿರುವಂತೆ ಕಾಣಿಸುವುದು.

* * *

ಒಂದು ಮೇಣದ ಬತ್ತಿ ಹತ್ತಿಸಿ ಮೇಜಿನ ಮೇಲಿಡು. ಈಗೊಂದು ಕಾರ್ಡು ತೆಗೆದುಕೊ. ಮೇಣದ ಬತ್ತಿಯ ಜ್ವಾಲೆ ನಿನ್ನ ಬಾಯಿಗೆ ತುಸ ದೂರದಲ್ಲಿರುವಂತೆ ನಿಂತು, ಜ್ವಾಲೆಗೂ ನಿನ್ನ ಬಾಯಿಗೂ ನಡುವೆ ಆ ಕಾರ್ಡನ್ನು ಹಿಡಿ. ಕಾರ್ಡು ಮೇಲೆ ಜೋರಾಗಿ ಊದು. ಕಾರ್ಡಿಗೆ ಆಚೆಕಡೆಯಿರುವ ಜ್ವಾಲೆ ಕಾರ್ಡಿನ ಕಡೆ—ಅಂದರೆ ನಿನ್ನ ಕಡೆ ಬರುತ್ತದೆ.

* * *

ಒಂದು ಬಿಳಿ ಕಾರ್ಡು ತೆಗೆದುಕೊಂಡು ಅದನ್ನು ಗುಂಡಾಗಿರುವ ಬಿಲ್ಲೆಯಾಗಿ ಕತ್ತರಿಸು. ಆ ಬಿಲ್ಲೆಯಮೇಲೆ ಕೆಳಗೆ ತೋರಿಸುವ ಚಿತ್ರದ ರೀತಿಯಲ್ಲಿ ಅಚ್ಚ ನೀಲಿ ಶಾಯಿಯಿಂದ ಒಂದು ನಕ್ಷತ್ರವನ್ನು ಬರೆ. ಈಗ ಆ ಬಿಲ್ಲೆಯನ್ನು ಪೆನ್ಸಿಲ್ ಮೊನೆಗೆ ಚುಚ್ಚಿ ಬೆರಳಿನಿಂದ



ಗಿರಗಿರನೆ ತಿರುಗಿಸಿ ನೋಡು. ನೀನು ಬರೆದ ನಕ್ಷತ್ರ ಕಾಣಿಸುವುದಿಲ್ಲ. ಬಿಲ್ಲೆಯ ಮಧ್ಯಭಾಗ ತೀರಾ ನೀಲಿ ಬಣ್ಣವಾಗಿ ಕಾಣಿಸಿ, ಬರಬರುತ್ತಾ ಬಣ್ಣ ಕಡಿಮೆಯಾಗಿ, ಅಂಚಿನ ಕೊನೆಗೆ ಬರುವವೇಳೆಗೆ ಬೆಳ್ಳಗೆ ಕಾಣಿಸುತ್ತದೆ.

# ಪೂಜಾರಿಯು ಕಥೆ

ಪೂರ್ವದಲ್ಲಿ ಒಬ್ಬ ಪೂಜಾರಿಯಿದ್ದನು. ಆತನು ಒಂದು ದಿನ ಸಂತೆಗೆ ಹೋಗಬೇಕಾಗಿ ಬಂದಿತು ಅದಕ್ಕಾಗಿ ಅವನು ತನ್ನ ಕುದುರೆಯನ್ನು ಸಿದ್ಧಪಡಿಸಿಕೊಂಡನು. ಆ ಕುದುರೆಯು ಬಲಿಷ್ಠವಾಗಿ ಮತ್ತು ಎತ್ತರವಾಗಿ, ಚೆನ್ನಾಗಿ ಬೆಳೆದಿದ್ದಿತು. ಪೂಜಾರಯ್ಯನು ಅದರಮೇಲೆ ಕುಳಿತು ಪ್ರಯಾಣ ಹೊರಟ ಕಾಲದಲ್ಲಿ ದಾರಿಯಲ್ಲಿ ಉಪ್ಪುನೇರಳೆ ಗಿಡಗಳು ಹಣ್ಣುಗಳಿಂದ ತುಂಬಿದ್ದವು. ಊರು ಸಮೀಪಿಸುತ್ತಾ ಬಂದಿತು. ಅಷ್ಟರಲ್ಲಿಯೇ ಪೂಜಾರಯ್ಯನಿಗೆ ಒಂದು ಸೊಗಸಾದ ತುಂಬ ಫಲ ಬಿಟ್ಟಿದ್ದ ಉಪ್ಪುನೇರಳೆ ಗಿಡ ಕಾಣಿಸಿಕೊಂಡಿತು. ಅದರಲ್ಲಿದ್ದ ಹಣ್ಣುಗಳು ದಪ್ಪಗೆ ಕಪ್ಪಗೆ ಕಂಗೊಳಿಸುತ್ತಿದ್ದುವು. ನಮ್ಮ ಪೂಜಾರಯ್ಯನಿಗೆ ಅವುಗಳನ್ನು ತಿನ್ನಲು ಬಲುಆಶೆಯಾಯಿತು ಆದರೆ ಅವನಿಗೆ ಒಂದು ಅಡ್ಡಿ ಇತ್ತು. ಆ ಗಿಡದ ಬುಡದಲ್ಲಿ ಮುಳ್ಳುಗಳಿದ್ದವು, ಮತ್ತು ಒಳ್ಳೆಯ ಹಣ್ಣುಗಳು ಬಹು ಎತ್ತರದಲ್ಲಿದ್ದವು. ಕುದುರೆಯನ್ನು ಹತ್ತಿರ ನಿಲ್ಲಿಸಿಕೊಂಡು, ಪೂಜಾರಿಯು ಅದರ ಬೆನ್ನಿನ ಮೇಲೆ ನಿಂತುಕೊಂಡು ತನ್ನ ಮನಸ್ಸಿಗೆ ತೃಪ್ತಿಯಾಗವವರೆಗೂ ಹಣ್ಣುಗಳನ್ನು ಸಂತೋಷದಿಂದ ತಿಂದನು. ಅಷ್ಟುಹೊತ್ತೂ ಆ ಕುದುರೆಯು ಕೊಂಚವೂ ಅಲುಗಾಡದೆ ನಿಂತಿತ್ತು. ಆಗ ಅವನು ಆ ಕುದುರೆಯ ಒಳ್ಳೆಯಗುಣಕ್ಕೆ ಮೆಚ್ಚಿದನು.

ಅವನಲ್ಲಿ ಒಂದು ದುರ್ಗುಣವಿತ್ತು ಏನೆಂದರೆ ಮನಸ್ಸಿಗೆ ತೋರಿದುದನ್ನೆಲ್ಲಾ ಬಾಯಲ್ಲಿ ಹೇಳಿಕೊಳ್ಳುತಿದ್ದನು. "ದೇವರೆ! ಈಗ ಯಾರಾದರೂ, 'ಹೇ! ಹೇ!' ಎಂದು ಕೂಗಿದರೆ ನನ ಗತಿ ಯೇನಾಗುವುದು" ಎಂದು ಪೂಜಾರಿಯು ಮಾತನಾಡಿಕೊಂಡನು. ಇವನು 'ಹೇ, ಹೇ' ಅಂದುಕೊಂಡ ತಕ್ಷಣ ಅದನ್ನು ಕೇಳಿ ಆ ಕುದುರೆಯು ಬೆದರಿ, ಓಡಿತು. ಪೂಜಾರಿಯು ತಕ್ಷಣ ಅತಿ, ಚೂಪಗೂ, ಹೆಚ್ಚಾಗಿಯೂ ಬೆಳೆದಿದ್ದ ಮುಳ್ಳುಗಳಮೇಲೆ ಬಿದ್ದನು. ಅವನಿಗೆ ಏಳಲೂ ಸಾಧ್ಯವಿಲ್ಲ. ಅಲುಗಾಡಲೂ ಆಗದು ಆ ಮುಳ್ಳಿನ ಹಾಸಿಗೆಯಿಂದ.

ಕುದುರೆಯು ನೆಟ್ಟಗೆ ಅವನ ಮನೆಗೆ ವಾಪಸು ಸೇರಿತು. ಅಲ್ಲಿದ್ದವರೆಲ್ಲಾ ಯಜಮಾನನನ್ನು ಕಾಣದೆ, ಅವನು ಎಲ್ಲೋ ಸತ್ತಿರಬೇಕೆಂದು ಅಳಲು ಪ್ರಾರಂಭಿಸಿದರು. ಅನಂತರ ಹುಡುಕುತ್ತಾ ಇವನು ಬಿದ್ದಿದ್ದ ಜಾಗಕ್ಕೆ ಬಂದರು.

"ನನ್ನನ್ನು ಇಲ್ಲಿಂದ ಎತ್ತಿರಿ! ಬೇಗ ಬನ್ನಿ! ಮೈಯೆಲ್ಲಾ ಗಾಯವಾಗಿ ರಕ್ತ ಮಯವಾಗಿದೆ" ಎಂದು ಪೂಜಾರಿಯು ಕೂಗಿಕೊಂಡನು. ಇದನ್ನು ಕೇಳಿ ಆಳುಗಳು ಅಲ್ಲಿಗೆ ಓಡಿಬಂದು ಅವನನ್ನು ಎತ್ತಿದರು.

"ಸ್ವಾಮಿ! ನಿಮ್ಮನ್ನು ಯಾರು ಇಲ್ಲಿ ತಳ್ಳಿದರು" ಎಂದು ಕೇಳಿದರು.

ಅದಕ್ಕೆ ಅವನು, "ಅಯ್ಯೋ! ನನ್ನನ್ನು ಯಾರೂ ಇಲ್ಲಿ ತಳ್ಳಲಿಲ್ಲ. ನನ್ನ ದುರಭ್ಯಾಸವೇ ನನ್ನನ್ನು ಹೀಗೆ ಮಾಡಿತು" ಎಂದು ನಡೆದುದನ್ನು ವಿವರಿಸಿ ತನ್ನನ್ನು ಜಾಗ್ರತೆ ಮನೆಗೆ ಕರೆದು ಕೊಂಡು ಹೋಗಿ ಉಪಚಾರ ಮಾಡಬೇಕೆಂದು ಕೇಳಿಕೊಂಡನು.

ಬುದ್ಧಿವಂತರು ತಮ್ಮ ಮನಸ್ಸಿಗೆ ತೋಚಿದುದನ್ನೆಲ್ಲಾ ಗಟ್ಟಿಯಾಗಿ ಹೇಳಿ ಬಿಡುವುದಿಲ್ಲ.

—ಕೆ. ಎಲ್. ರಮಾಮಣಿ, ತುಮಕೂರು.

# ಮುಖಚಿತ್ರ

ದುಷ್ಟನಾದ ನರಕಾಸುರನನ್ನು ಶ್ರೀಕೃಷ್ಣನು ಸಂಹರಿಸಿದನಲ್ಲವೆ! ಅನಂತರ ಆ ಅಸುರನ ಕಾರಾಗೃಹದಲ್ಲೂ ಅಂತಃಪುರದಲ್ಲೂ ಬಂಧಿತರಾಗಿದ್ದ ಅನೇಕ ಸಾವಿರ ಜನರನ್ನು ಬಿಡುಗಡೆ ಮಾಡಿದನು. ಅದರಲ್ಲಿ ಹದಿನಾರು ಸಾವಿರಮಂದಿ ಕನ್ಯೆಯರನ್ನು ಅವರ ಇಷ್ಟಪ್ರಕಾರ ಮದುವೆಯೂ ಆದನು. ಎಷ್ಟು ವಿಚಿತ್ರ, ಅಲ್ಲವೆ! ಈ ಸಮಾಚಾರವನ್ನು ಕೇಳಿ ಕುತೂಹಲಪರನಾದ ನಾರದಮಹರ್ಷಿಗೆ ಅಷ್ಟು ಜನ ಸ್ತ್ರೀಯರೊಂದಿಗೆ ಹೇಗೆ ಇರುವನೋ ಆ ಕೃಷ್ಣಪರಮಾತ್ಮನನ್ನು ನೋಡಿಕೊಂಡು ಬರೋಣವೆನ್ನಿಸಿತು ಸರಿ, ಕೂಡಲೇ ಹೊರಟು ಕೃಷ್ಣನ ವಾಸಸ್ಥಾನವಾದ ಅತಿವೈಭವವುಳ್ಳ ದ್ವಾರಕಾಪುರಿಗೆ ಬಂದನು. ಆನಂದ ಮೂರ್ತಿಗಳಾದ ರುಕ್ಮಿಣೀಕೃಷ್ಣರನ್ನು ಸಂದರ್ಶಿಸಿದನು.

ಕೃಷ್ಣನು ಜಗ್ಗನೆದ್ದು ಮಹರ್ಷಿಗೆ ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿ ಕುಶಲಪ್ರಶ್ನೆ ಮಾಡಿದನಂತರ ನಾರದನು "ಸರ್ವಲೋಕೇಶ್ವರಾ, ಲೋಕ ಕ್ಷೇಮಕ್ಕಾಗಿ ನೀನು ಅವತಾರವೆತ್ತುವ ಸಂಗತಿ ನನಗೆ ಮೊದಲೇ ಗೊತ್ತು. ಸಂಸಾರಸಾಗರದಲ್ಲಿ ಮುಳುಗಿದಂತಹವರಿಗೆ ಮುಕ್ತಿ ಮಾರ್ಗ ತೋರಿಸುವ ನಿನ್ನ ಪಾದಯುಗಳ ದರ್ಶನ ಲಭಿಸಿತು. ಅದಕ್ಕಿಂತ ಇನ್ನೇನಾಗಬೇಕು!" ಎಂದು ಸ್ತುತಿಸಿ ಬೀಳ್ಕೊಂಡು ಹೊರಟು ಮತ್ತೊಬ್ಬ ಗೋಪಿಕೆಯ ಗೃಹಕ್ಕೆ ಬಂದನು. ಅದೇನು ವಿಚಿತ್ರ, ಅಲ್ಲೂ ಕೃಷ್ಣನೇ! ಅಲ್ಲಿ ಮಡದಿಯೊಡನೆ ಸಲ್ಲಾಪ ಮಾಡುತ್ತಾ ತಾಂಬೂಲ ಸೇವಿಸುತ್ತಿದ್ದ ಕೃಷ್ಣನು ಕೂಡಲೇ ಎದ್ದು ಬಂದು ಆಗತಾನೇ ಕಂಡವನಂತೆ ಮಹರ್ಷಿಗೆ ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಿ ಕುಶಲಪ್ರಶ್ನೆ ಮಾಡಿದನು.

ನಾರದನಿಗೆ ಪರಮಾಶ್ಚರ್ಯವಾಯಿತು. ಕೃಷ್ಣನ ಮಹಿಮೆಯನ್ನು ಇನ್ನೂ ನೋಡೋಣವೆಂದು ಮುಂದೆ ಹೊರಟು ಮತ್ತೊಬ್ಬ ಗೋಪಿಕೆಯ ಗೃಹಕ್ಕೆ ಬಂದನು.

ಅಲ್ಲಿ ಕೃಷ್ಣನು ತಂಪಾದ ಮರದಡಿ ಶಾಂತಿಸ್ವರೂಪನಾಗಿ ಏಕಾಂತವಾಗಿ ಭಾರ್ಯೆಯೊಡನೆ ಮುರಳಿಯನ್ನು ಊದುತ್ತಾ ಆನಂದಯುಕ್ತನಾಗಿದ್ದುದನ್ನು ನಾರದನು ಕಂಡನು. ಅಲ್ಲಿಂದ ಮತ್ತೊಂದುಕಡೆ ಬರಲು ಅಲ್ಲಿ ತನ್ನ ಮಕ್ಕಳನ್ನೆತ್ತಿ ಮುದ್ದಾಡುತ್ತಿದ್ದ ಪ್ರೇಮಮೂರ್ತಿ ಕೃಷ್ಣನು ಸತಿಸಹಿತ ಕಂಡನು. ಇನ್ನೊಂದುಕಡೆ ಉದ್ಧವನೊಂದಿಗೆ ಪಗಡೆಯಾಟವಾಡುತ್ತಿದ್ದುದು ಕಂಡಿತು. ಮತ್ತೊಂದುಕಡೆ ವ್ಯಾಜ್ಯ ಪರಿಹರಿಸುತ್ತಿದ್ದ ನ್ಯಾಯಮೂರ್ತಿ ಕೃಷ್ಣನು ಕಂಡನು. ಮಗದೊಂದುಕಡೆ ಸೇವಾಪರನಾಗಿ ಶ್ರೀಕೃಷ್ಣನು ಭಾಗವತ ಬ್ರಾಹ್ಮಣರಿಗೆ ತಾನೇ ಭೋಜನ ವಿಡುತ್ತಿರುವುದು ಕಂಡಿತು ಹೀಗೆ ಲೀಲಾ ಮಾನುಷವಿಗ್ರಹನಾದ ಶ್ರೀಕೃಷ್ಣಪರಮಾತ್ಮನು ಏಕ ಕಾಲದಲ್ಲಿ ಅನೇಕರೂಪಗಳೊಂದಿಗೆ ತನ್ನ ಎಲ್ಲ ಸತೀಮಣಿಯರೊಂದಿಗೆ ವಾಸಿಸುತ್ತಾ ಸರ್ವಾಂತರ್ಯಾಮಿಯಾಗಿ ಕರ್ತವ್ಯ ನಡೆಸುತ್ತಿರುವುದನ್ನು ಕಂಡು ನಾರದನು ಅತಿ ಹರ್ಷದಿಂದ "ದೇವಾದಿದೇವಾ, ನಿನ್ನ ಯೋಗಮಾಯಾವಿಲಾಸವನ್ನು ಕಾಣುವುದು ಸುಲಭವಲ್ಲ. ನಿನ್ನ ಮಹಿಮೆಯನ್ನು ಇಂದು ಕಂಡು ಧನ್ಯನಾದೆನು. ಅನುಜ್ಞೆಕೊಡು" ಎಂದು ಸ್ತುತಿಸಿ ಬೀಳ್ಕೊಂಡು ತನ್ನ ಲೋಕಕ್ಕೆ ಹೊರಟನು.

Controlling Editor : SRI CHAKRAPANI

Printed and Published by B. NAGI REDDI at the B. N. K. Press Madras 1



Chandamama, Nov. '51

Photo by B. Ranganadham

ಹಾಲಿನ ಚದುರೆ

